ಪಶ್ಚಿಮ ಬಂಗಾಲ ಸರ್ಕಾರವು ಕೇಂದ್ರ-ರಾಜ್ಯ ಸಂಬಂಧದ ಬಗ್ಗೆ ಕೇಂದ್ರಕ್ಕೆ ಮನವಿ ಸಲ್ಲಿಸಿದಾಗಿನಿಂದ, ಆ ವಿಷಯದ ಮೇಲಿನ ವಾದ- ವಿವಾದಗಳು ಇಡೀ ರಾಷ್ಟ್ರದ ಗಮನವನ್ನು ಸೆಳೆದಿದೆ. ಅದನ್ನು ಚರ್ಚಿಸಲು ದೇಶದಾದ್ಯಂತ ಸಮ್ಮೇಳನಗಳೂ, ಚರ್ಚಾಕೂಟಗಳೂ, ಜರುಗುತ್ತಲೇ ಇವೆ ವಿದ್ಯಾರ್ಥಿಗಳೂ, ಶಿಕ್ಷಕರೂ, ವಕೀಲರೂ ಮತ್ತು ಇತರೇ ಬುದ್ಧಿಜೀವಿಗಳೆಲ್ಲ ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆಯನ್ನು ಕೊಡಬೇಕೆಂಬ ಬೇಡಿಕೆಯನ್ನು ಬೆಂಬಲಿಸುತ್ತಿದ್ದಾರೆ. ಪಶ್ಚಿಮ ಬಂಗಾಲ ಸರ್ಕಾರದ ಮನವಿಯನ್ನೂ ಹಾಗೂ ಆ ವಿಷಯದ ಮೇಲೆ ಸಿ. ಪಿ. ಐ. (ಎಮ್) ನ ಪ್ರಧಾನ ಕಾರ್ಯದರ್ಶಿ ಇ.ಎಮ್.ಎಸ್. ನಂಬೂದರಿಪಾದ್ ರವರ ಲೇಖನವನ್ನೂ, ಅದೇ ಪಕ್ಷದ ಪಾಲಿಟ್ ಬ್ಯುರೋ ಸದಸ್ಯರಾದ ಪಿ. ರಾಮಮೂರ್ತಿಯವರು ರಾಜ್ಯಸಭೆಯಲ್ಲಿ ಮಾಡಿದ ಭಾಷಣವನ್ನೂ, ಮತ್ತು ಇಂಡಿಯನ್ ಇನ್‌ಸ್ಟಿಟ್ಯೂಟ ಆಫ್ ಮೇನೆಜಮೆಂಟಿನ, ಸನತ್ ಬೋಸ್ ಅವರ ಲೇಖನವನ್ನೂ ಇಲ್ಲಿ ಕನ್ನಡದಲ್ಲಿ ಪ್ರಕಟಿಸುವದರ ಮೂಲಕ ಸಮತಾ ಪ್ರಕಾಶನವು ಇಂಥ ರಾಷ್ಟ್ರ ಮಟ್ಟದ ಮಹತ್ವದ ಚರ್ಚೆಯಲ್ಲಿ ಭಾಗಿಯಾಗುತ್ತಿದೆ ಈ ವಿಷಯದ ಮೇಲೆ ಇಂಥ ಕಿರುಪುಸ್ತಕವನ್ನು ಕನ್ನಡದಲ್ಲಿ ಪ್ರಪ್ರಥಮವಾಗಿ ಪ್ರಕಟಿಸಿ ಕನ್ನಡ ಜನತೆಯು ಈ ಚರ್ಚೆಯಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಡುವುದಕ್ಕೆ ನಮಗೆ ಹೆಮ್ಮೆಯಾಗುತ್ತಿದೆ.

ಮೇಲೆ ಉಲ್ಲೇಖಿಸಿದ ಲೇಖಕರಿಗೂ, ಕನ್ನಡಕ್ಕೆ ಅನುವಾದಿಸಿದ ಯಡೂರ ಮಹಾಬಲ ಅವರಿಗೂ, ಅಂದವಾಗಿ ಮುದ್ರಿಸಿಕೊಟ್ಟ ನೇತಾಜಿ ಪ್ರಿಂಟಿಂಗ್ ಪ್ರೆಸ್ ನವರಿಗೂ ನಮ್ಮ ಕೃತಜ್ಞತೆಗಳು.

ಪ್ರಕಾಶಕರು

## ಕೇಂದ್ರ-ರಾಜ್ಯಗಳ ಸಂಬಂಧ

# ಪಶ್ಚಿಮ-ಬಂಗಾಳ ಸರ್ಕಾರದ ಮನವಿ

ಕೇಂದ್ರ-ರಾಜ್ಯಗಳ ಸಂಬಂಧದ ಪ್ರಶ್ನೆಯು, ಭಾರತದ ಐಕ್ಯತೆಯನ್ನೂ, ಸಮಗ್ರತೆಯನ್ನೂ, ಅದರ ಭಾಷೆ, ಸಂಸ್ಕೃತಿಗಳ ವೈವಿಧ್ಯತೆಯ ಚೌಕಟ್ಟಿನೊಳಗೇ ಕಾಪಾಡಿಕೊಂಡು ಬರುವುದರಲ್ಲಿ ನಿರ್ಣಾಯಕ ಮಹತ್ವವನ್ನು ಪಡೆದಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ದೇಶದಲ್ಲಿ ನೆಲೆಸಿರುವ ಅನೇಕ ಭಾಷಿಕ, ಸಾಂಸ್ಕೃತಿಕ ಜನ ಸಮುದಾಯಗಳು, ವಸಾಹತುಶಾಹಿಯ ದಾಸ್ಯದಿಂದ ವಿಮೋಚನೆ ಹೊಂದುವ ಏಕೈಕ ಆಕಾಂಕ್ಷೆಯಿಂದ ಐಕಮತ್ಯೆಯನ್ನು ಹೊಂದಿದ್ದವು. ಇಂದು ತಮಗಾಗಿ ಸಮೃದ್ಧ ಜೀವನವನ್ನು ನಿರ್ಮಿಸಿಕೊಳ್ಳಲು ಸಾಮ್ರಾಜ್ಯಶಾಹಿಯ ಹಸ್ತಕ್ಷೇಪವಿಲ್ಲದೆ, ತಮ್ಮ ತಮ್ಮ ಸಾಮಾಜಿಕ, ಆರ್ಥಿಕ, ಭಾಷಿಕ, ಸಾಂಸ್ಕೃತಿಕ ಅಗತ್ಯತೆಗಳಿಗನುಗುಣವಾಗಿ ತಮ್ಮ ರಾಷ್ಟ್ರೀಯ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಆಕಾಂಕ್ಷೆಯಿಂದ ಐಕಮತ್ಯವನ್ನು ಹೊಂದಿವೆ. ಈ ಆಕಾಂಕ್ಷೆಗಳನ್ನು ನೆರವೇರಿಸಿಕೊಳ್ಳಲು ನಡೆಸುವ ಹೋರಾಟವೇ ಕೇಂದ್ರ, ರಾಜ್ಯ ಸರಕಾರಗಳೂ, ರಾಜಕೀಯ ಪಕ್ಷಗಳೂ, ಹಾಗೂ ಎಲ್ಲಾ ಜನತೆಯೂ, ವೈವಿಧ್ಯತೆಯಲ್ಲಿಯೇ ಐಕ್ಯತೆಯ ಅಗತ್ಯತೆಯನ್ನು ಅರಿಯುವಂತೆ ಮಾಡಿದೆ.

ಸ್ವಾತಂತ್ರ್ಯಾನಂತರ ಅಳವಡಿಸಿದ ಸಂವಿಧಾನವನ್ನು "ಫೆಡರಲ್" [ಸಂಯುಕ್ತಗೊಂಡಿದ್ದರೂ ಒಳಆಡಳಿತದಲ್ಲಿ ಸ್ವತಂತ್ರವಾಗಿರುವ ರಾಜ್ಯಗಳು] ಎಂದು ವಿವರಿಸಲ್ಪಟ್ಟಿದ್ದರೂ, ಮೂಲಾಂಶಗಳಲ್ಲಿ ಏಕಾತ್ಮಕವಾದ (Unitary) ಗುಣಗಳನ್ನು ಹೊಂದಿದೆ. ರಾಜ್ಯಗಳ ಸ್ವಾಯತ್ತತೆಯ ನಿರಾಕರ ... ಅಧಿಕಾರವನ್ನು ನೀಡಿದೆ. ಈ ಕಾರಣದಿಂದಲೇ ... rrent) ಪಟ್ಟಿಯು ೪೭ ವಿಷಯಗಳನ್ನು ... ಸಿಕೊಂಡಾಗಿನಿಂದ ರಾಜ್ಯದ ಅಧಿಕಾರದ ಕೇಂದ್ರೀಕರಣ ಆಗಿದೆ.





ಮೇಲೆ ಆಕ್ರಮಣವೆಸಗಿ ಕಬಳಿಸುವ ಪ್ರವೃತ್ತಿ ಸತತವಾಗಿ ಬೆಳೆದು ಬಂದಿದೆ. ಕೇಂದ್ರ ಮತ್ತು ಎಲ್ಲಾ ರಾಜ್ಯಗಳಲ್ಲಿಯೂ (ಕೆಲವು ರಾಜ್ಯಗಳಲ್ಲಿ ಮಾತ್ರ ಅದೂ ಅಲ್ಪಾವಧಿ ಕಾಲವನ್ನು ಬಿಟ್ಟು) ಒಂದೇ ರಾಜಕೀಯ ಪಕ್ಷ ಅಧಿಕಾರ ದಲ್ಲಿದ್ದುದು ಈ ಪ್ರವೃತ್ತಿಯ ಬೆಳವಣಿಗೆಗೆ ಮತ್ತಷ್ಟು ಅನುಕೂಲಕರವಾಯಿತು

ಹಿಂದಿನ ಎರಡು ದಶಕಗಳಲ್ಲಿ ರಾಜ್ಯಗಳ ಸ್ವಾಯತ್ತತೆಯನ್ನು ವಾಸ್ತವವಾಗಿಸಲೂ, ಪರಿಣಾಮಕಾರಿಯಾಗಿಯೂ ಮಾಡಲು, ರಾಜ್ಯಗಳಿಗೆ ಹೆಚ್ಚಿನ ಅಧಿಕಾರ ಕೊಡಬೇಕೆಂಬ ಬೇಡಿಕೆ ಬೆಳೆದು ಬರುತ್ತಿದ್ದರೂ ; ರಾಜ್ಯ ಸರ್ಕಾರಗಳ ಪ್ರಜಾಸತ್ತಾತ್ಮಕ ಕಾರ್ಯಾಚರಣೆಯನ್ನೇ ದುರ್ಬಲಗೊಳಿಸಲು, ಇದ್ದ ಅಲ್ಪ ಸ್ವಲ್ಪ ಅಧಿಕಾರವನ್ನು ಸಹ ಕಸಿದುಕೊಳ್ಳುವ ಹಠ ಪ್ರಯತ್ನಗಳು ಸಾಕಷ್ಟು ನಡೆದಿವೆ ಸಂವಿಧಾನದ ರಾಜ್ಯ ಪಟ್ಟಿಗೇ [State list] ಸೀಮಿತ ವಾಗಿ ತಮ್ಮ ವ್ಯವಹಾರಗಳನ್ನು ನಡೆಸಲು ಜನರಿಗಿದ್ದ ಹಕ್ಕನ್ನೇ ಅಪಹಾಸ್ಯಕ್ಕೀಡು ಮಾಡಲಾಗಿದೆ ಈ ಉದ್ದೇಶಕ್ಕಾಗಿ ಎಲ್ಲಾ ರೀತಿಯ ಬಲವನ್ನೂ ಬಳಸಲಾ ಯಿತು. ಕೆಲವೊಮ್ಮೆ ನೇರವಾಗಿ ಕೇಂದ್ರದ ಅಧಿಕಾರ ಬಲದ ಮೂಲಕವೂ ; ಮತ್ತೆ ಕೆಲವು ಸಲ ಪರೋಕ್ಷವಾಗಿ ಕಾಂಗ್ರೆಸ್ಸೇತರ ಪಕ್ಷಗಳ ಸರಕಾರಗಳಿಗೆ ಹಣಕಾಸು ಹಾಗೂ ಇತರೇ ಸೌಲಭ್ಯಗಳನ್ನು ನಿರಾಕರಿಸುವುದರ ಮೂಲಕವೂ ; ಹಾಗೂ ಕಾಂಗ್ರೆಸ್ ಪಕ್ಷದ ಮುಖ್ಯಮಂತ್ರಿಗಳ ಮೇಲೆ ಪಕ್ಷದ ಮತ್ತು ಪಕ್ಷದ ಮುಖಂಡರ ಒತ್ತಡ, ಪ್ರಭಾವದಿಂದಲೂ, ಈಕಾರ್ಯವನ್ನು ಸಾಧಿಸಲಾಯಿತು.

ಕಳೆದ ಹತ್ತು ವರ್ಷಗಳಿಂದಲೂ ಕೇಂದ್ರ ರಿಸರ್ವ ಪೋಲೀಸ್, ಗಡಿ ಭದ್ರತಾದಳ, ಕೈಗಾರಿಕಾ ಭದ್ರತಾದಳಗಳ ನಿರ್ಮಾಣಗಳಿಂದ ನಿಯಮಾನುಸಾ ರವಾಗಿ ರಾಜ್ಯದ ವಿಷಯವಾದ ಕಾನೂನು ಮತ್ತು ಶಿಸ್ತು ಪಾಲನೆಯ ರಂಗದ ಲ್ಲಿಯೂ ಸಹ ಕೇಂದ್ರದ ಕಪ್ಪು ಹಸ್ತವು ಚಾಚಲ್ಪಟ್ಟಿದೆ. ೪೨ನೇ ಸಂವಿಧಾನ ತಿದ್ದುಪಡಿಯಿಂದ ರಾಜ್ಯದ ವಿಷಯವಾಗಿದ್ದ ಶಿಕ್ಷಣವೂ ಸಹ ಸಂಗತ [Concurrent] ಪಟ್ಟಿಗೆ ವರ್ಗಾಯಿಸಲ್ಪಟ್ಟಿದೆ. ಈ ಪ್ರಕ್ರಿಯೆ ಇಂದು ರಾಜ್ಯಗಳನ್ನೇ ಕೇಂದ್ರದ ಅಧೀನ ವಿಭಾಗಗಳ ಅಂತಸ್ತಿನಷ್ಟು ಕೆಳಮಟ್ಟಕ್ಕಿಳಿ ಸುವ ಅಪಾಯದ ಹಂತವನ್ನು ತಲುಪಿದೆ. ತುರ್ತುಪರಿಸ್ಥಿತಿ ಈ ಪ್ರಕ್ರಿಯೆ ಯನ್ನು ಮತ್ತಷ್ಟು ತೀವ್ರಗೊಳಿಸಿತು. ಅಂದಿನ ಇಪ್ಪತ್ತು ತಿಂಗಳುಗಳಲ್ಲಿ ಜಾರಿ

ಗೊಳಿಸಿದ ಕ್ರಮಗಳಿಂದ ಯಾವುದೇ ರಾಜ್ಯ ಕೇಂದ್ರದ ಬಾಲವನ್ನು ಹಿಡಿಯದಿದ್ದಲ್ಲಿ, ಮಂತ್ರಿಮಂಡಳ, ಶಾಸನ ಸಭೆಗಳನ್ನು ಯಾವುದೇ ಕ್ರಮಗಳಿಂದಲಾದರೂ ಉರುಳಿಸಲ್ಪಡುವ ಭಯವನ್ನು ನಿಸ್ಸಂಶಯವಾಗಿ ಸತತವಾಗಿ ಎದುರಿಸಬೇಕಾಗಿ ಬಂದಿದ್ದು ಸ್ಪಷ್ಟವಾಗಿದೆ.

ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಕೇಂದ್ರ ರಾಜ್ಯಗಳ ಸಂಬಂಧದ ವಿಷಯವು ಹೊಸ ಮಹತ್ವವನ್ನು ಪಡೆದಿದೆ. ಇಂದು ವಿವಿಧ ರಾಜ್ಯಗಳಲ್ಲಿಯೂ ಹಾಗೂ ಕೇಂದ್ರದಲ್ಲಿಯೂ ಬೇರೆ ಬೇರೆ ಪಕ್ಷಗಳು ಅಧಿಕಾರದಲ್ಲಿವೆ. ಕಾಂಗ್ರೆಸಿನ ಏಕಪಕ್ಷೀಯ ಸರ್ವಾಧಿಕಾರದ ಆಳ್ವಿಕೆಯ ನಿರ್ಗಮನದಿಂದುಂಟಾದ ಈ ಪರಿಸ್ಥಿತಿಯು ಸ್ವಾಗತಾರ್ಹವಾದುದು. ಬಹುಪಕ್ಷೀಯ ಪ್ರಜಾಸತ್ತಾತ್ಮಕ ವ್ಯವಸ್ಥೆ ಉಳಿಯಲು ಸಂಯುಕ್ತ ಸ್ವರೂಪದ ವ್ಯವಸ್ಥೆಯ ತತ್ವಗಳನ್ನು (Federal Principles) ಸರಿಯಾಗಿ ತಿಳಿದುಕೊಂಡು ಅನ್ವಯಿಸಬೇಕೆಂಬುದು ಜನತೆಯ ಪ್ರಜಾಸತ್ತಾತ್ಮಕ ಆಕಾಂಕ್ಷೆಗಳಲ್ಲೊಂದಾಗಿದೆ.

ಧರ್ಮ, ಜನಾಂಗ, ಭಾಷೆ, ಸಂಸ್ಕೃತಿಗಳಲ್ಲಿ ವೈವಿಧ್ಯತೆ ಇರುವ ಭಾರತದಂತಹ ದೇಶದಲ್ಲಿ ಪ್ರಜ್ಞಾಪೂರ್ವಕ ಸ್ವಯಂ ಪ್ರಯತ್ನದಿಂದ ಮಾತ್ರ ರಾಷ್ಟ್ರೀಯ ಸಮಗ್ರತೆಯನ್ನು ಸಾಧಿಸಲು ಸಾಧ್ಯ. ರಾಜ್ಯಗಳಿಗೆ ಹೆಚ್ಚಿನ ಅಧಿಕಾರವನ್ನು ವರ್ಗಾಯಿಸುವದು, ವಿಚ್ಛಿದ್ರಕಾರಿ ಪ್ರವೃತ್ತಿಗಳನ್ನು ಪ್ರೋತ್ಸಾಹಿಸದೆ ಬದಲು ದೂರೀಕರಿಸುವುದಕ್ಕೆ ಸಹಾಯವಾಗುತ್ತದೆ. ಪ್ರಭಲ ಹಾಗೂ ಏಕೀಕೃತ ಭಾರತ ಸಾಧ್ಯವಾಗುವುದು ವಿವಿಧ ರಾಜ್ಯದ ಜನತೆಯ ಪ್ರಜಾಸತ್ತಾತ್ಮಕ ಆಕಾಂಕ್ಷೆಗಳನ್ನೂ, ವೈಶಿಷ್ಟ್ಯತೆಯನ್ನೂ ನಿರ್ಲಕ್ಷಿಸುವದರಿಂದಲ್ಲ ಬದಲು ಮಾನ್ಯ ಮಾಡುವುದರಿಂದ ಮಾತ್ರ.

ನಾವು ರಾಜ್ಯಗಳು ಪ್ರಭಲವಾಗಿರಬೇಕೆಂಬ ನಿಲುವು ತಾಳಿರುವುದು ನಿಜ. ಆದರೆ ಯಾವ ಕಾರಣಕ್ಕೂ ನಾವು ನಿಶ್ಯಕ್ತವಾದ ಕೇಂದ್ರವನ್ನು ಅಪೇಕ್ಷಿಸುವುದಿಲ್ಲ ಒಮ್ಮೆ ಕೇಂದ್ರ, ರಾಜ್ಯಗಳ ಅಧಿಕಾರದ ರಂಗಗಳನ್ನು ಸ್ಪಷ್ಟವಾಗಿ ಗುರುತಿಸಿದರೆ, ಪ್ರಭಲ ರಾಜ್ಯದ ಪರಿಕಲ್ಪನೆಯು, ಪ್ರಭಲ ಕೇಂದ್ರದ ಪರಿಕಲ್ಪನೆಗೆ ವಿರೋಧವಾದುದಾಗಿಲ್ಲ. ಸಂವಿಧಾನದ ಪ್ರಸ್ತಾವನೆಯಲ್ಲಿ ಭಾರತ ಗಣರಾಜ್ಯವನ್ನು ವಿವರಿಸಲು "ಫೆಡರಲ್" (Federal) ಪದ ಒಳಗೊಳ್ಳುವ

ಹಾಗೆ ತಿದ್ದುಪಡಿ ಮಾಡಬೇಕು. ತತ್ಪರಿಣಾಮವಾಗಿ ಎಲ್ಲಾ ಕಡೆಗಳಲ್ಲಿಯೂ "ಒಕ್ಕೂಟ" (Union) ಎಂಬ ಪದದ ಬದಲು "ಸಂಯುಕ್ತ ರಾಷ್ಟ್ರ" [Federation] ಎನ್ನುವ ಪದವಿರುವ ಹಾಗೆ ಬದಲಾವಣೆ ಮಾಡಬೇಕು.

ರಾಜ್ಯಗಳ ಸ್ವಾಯತ್ತತೆಯನ್ನು ಕಾಪಾಡಲು ೨೪೮ ನೇ ನಿಬಂಧನೆಯನ್ನು [Article] ತಿದ್ದುಪಡಿ ಮಾಡಬೇಕು. ಸಂವಿಧಾನದ ಕೇಂದ್ರ ಮತ್ತು ಸಂಗತ (Concurrent) ಪಟ್ಟಿ ಬಿಟ್ಟು, ರಾಜ್ಯಪಟ್ಟಿಯಲ್ಲಿನ ವಿಷಯಗಳ ಬಗ್ಗೆ ಯಾವುದೇ ಕಾನೂನನ್ನು ಜಾರಿಗೊಳಿಸುವ ಅಧಿಕಾರ ರಾಜ್ಯದ ಶಾಸನ ಸಭೆಗೆ ಮಾತ್ರವೇ ಇರಬೇಕು. ಸಧ್ಯದಲ್ಲಿ ಈ ಹಕ್ಕು ಪಾರ್ಲಿಮೆಂಟಿಗೆ ಮಾತ್ರವೇ ಇದೆ. ಅಂದರೆ ಸಂಯುಕ್ತ ರಾಷ್ಟ್ರದ (Federation) ಉಳಿಕೆ ಅಧಿಕಾರವು [residual power] ಘಟಕಗಳಿಗೇವಿರಬೇಕೇ ವಿನಃ ಕೇಂದ್ರಕ್ಕೆ ಅಲ್ಲ.

ರಾಜ್ಯಗಳು ಹೇಗೆ ಕಾರ್ಯವೆಸಗಬೇಕೆಂದರೆ, ತಮ್ಮ ಪೂರ್ಣ ಹಕ್ಕುಗಳನ್ನು ಚಲಾಯಿಸುವಾಗ ಕೇಂದ್ರ ಸರಕಾರದ ವ್ಯಾಪ್ತಿಗೊಳಪಡುವ ಅಧಿಕಾರವನ್ನು ಉಲ್ಲಂಘಿಸಬಾರದು. ಅದೇ ರೀತಿ ಕೇಂದ್ರವೂ ಸಹ ಶಾಸಕಾಂಗ ಮತ್ತು ಕಾರ್ಯಾಂಗಗಳೆರಡರಲ್ಲಿಯೂ ರಾಜ್ಯವ್ಯಾಪ್ತಿಗೊಳಪಟ್ಟ ವಿಷಯಗಳ ಬಗ್ಗೆ ಹಸ್ತಕ್ಷೇಪ ಮಾಡಬಾರದು.

ರಾಷ್ಟ್ರೀಯ ಹಿತಾಸಕ್ತಿ ಎನ್ನುವ ನೆಪದಲ್ಲಿ ರಾಜ್ಯಪಟ್ಟಿಯಲ್ಲಿರುವ ವಿಷಯಗಳ ಬಗ್ಗೆ ಶಾಸನಗಳನ್ನು ಮಾಡುವ ಹಕ್ಕನ್ನು ಪಾರ್ಲಿಮೆಂಟಿಗೆ ನೀಡುವ ೨೪೯ ನೇ ನಿಬಂಧನೆಯನ್ನು ಪೂರ್ಣವಾಗಿ ತೆಗೆದುಹಾಕಬೇಕು.

ರಾಜ್ಯದ ಅಧಿಕಾರವ್ಯಾಪ್ತಿಯನ್ನು ವಿಸ್ತರಿಸುವಾಗ ಯಾವುದೇ ಒಂದು ರಾಜ್ಯದಿಂದ ಸಾಧ್ಯವಲ್ಲದ, ಕೇಂದ್ರಾಧಿಕಾರದಿಂದಲೇ ನಿಯಂತ್ರಿಸಬೇಕಾದ, ಗಡಿ ರಕ್ಷಣೆ, ವಿದೇಶಿ ವ್ಯವಹಾರ, ವಿದೇಶಿ ವ್ಯಾಪಾರ, ಹಣ [currency] ಸಂಪರ್ಕ ಮತ್ತು ಅರ್ಥಿಕ ಸಮನ್ವಯತೆ ಮುಂತಾದ ವಿಷಯಗಳನ್ನು ಕೇಂದ್ರದಲ್ಲೇ ಇರಿಸಿಕೊಂಡು, ಕೇಂದ್ರದ ಅಧಿಕಾರವನ್ನು ಪ್ರಭಲಗೊಳಿಸಬೇಕು. ಕೇಂದ್ರದ ಪಾತ್ರ ಸಮನ್ವಯ ಕಾರ್ಯ ನಿರ್ವಹಿಸುವದಾಗಿರಬೇಕು. ಯೋಜನೆ, ಬೆಲೆ ಮತ್ತು ವೇತನಗಳನ್ನು ನಿರ್ಧರಿಸುವುದು ಮುಂತಾದ ವಿಷಯಗಳಲ್ಲಿ

ಕೇಂದ್ರವು ಸಮನ್ವಯ ಕಾರ್ಯವನ್ನು ನಿರ್ವಹಿಸುವುದಷ್ಟೇಯಲ್ಲದೆ, ಸಾರ್ವತ್ರಿಕ ನಿರ್ದೇಶನಗಳನ್ನೂ ಸಹ ನೀಡಬೇಕು.

ಆದಾಗ್ಯೂ ಕೇಂದ್ರದ ಯೋಜನೆ, ಆರ್ಥಿಕ ಸಮನ್ವಯ ಕಾರ್ಯಗಳು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ನೀಡಿದ ಮಾರ್ಗದರ್ಶನ ತತ್ವಗಳಿಗೆ ಸರಿಹೊಂದುವಂತಿರಬೇಕು. ಅಲ್ಲದೇ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯಲ್ಲಿ ಕೇಂದ್ರದ ಜೊತೆಗೆ ರಾಜ್ಯಗಳಿಗೂ ಪ್ರಾತಿನಿಧ್ಯವಿರಬೇಕು. ಪ್ರಸ್ತುತದಲ್ಲಿ ರಾಷ್ಟ್ರೀಯ ಅಭಿವೃದ್ಧಿ ಮಂಡಳಿ (National Development Council) ಯನ್ನಾಗಲಿ, ಯೋಜನಾ ಆಯೋಗವನ್ನಾಗಲಿ [Planning Commission] ಸಂವಿಧಾನದಲ್ಲಿ ಸ್ಪಷ್ಟವಾಗಿ ತೋರಿಸಲಾಗಿಲ್ಲ.

ಸಂವಿಧಾನದಲ್ಲಿ ಪ್ರತ್ಯೇಕ ನಿಬಂಧನೆಯನ್ನು ಸೇರಿಸುವುದರಿಂದ ಈ ನ್ಯೂನ್ಯತೆಯನ್ನು ನಿವಾರಿಸಬಹುದು, ಈ ನಿಬಂಧನೆಯಲ್ಲಿಯೇ ಯೋಜನಾ ಆಯೋಗದ ರಚನೆಯನ್ನು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯೇ ನಿರ್ಧರಿಸಬೇಕೆಂದು ಸ್ಪಷ್ಟಪಡಿಸಬೇಕು. ಸಧ್ಯದಲ್ಲಿ ಅಭಿವೃದ್ಧಿ ಕೆಲಸಗಳಿಗೆ ಸಾಲ, ಸಹಾಯಗಳನ್ನು ನೀಡುವುದು ಯೋಜನಾ ಆಯೋಗದ ವಿಶೇಷಾಧಿಕಾರವಾಗಿದೆ ಆ ಕಾರಣ ಆಯೋಗದ ಕಾರ್ಯ ರೀತಿಯನ್ನು ನಿರ್ಧರಿಸಲು ರಾಜ್ಯಗಳಿಗೂ ಸಹ ಹಕ್ಕುಗಳಿರಬೇಕಾದದ್ದು ಅತ್ಯಾವಷ್ಯಕ.

ಆದರೆ ವಿದೇಶಿ ಸಂಬಂಧ, ಗಡಿರಕ್ಷಣೆ, ಸಂಪರ್ಕ, ಹಣ (Currency) ಹಾಗೂ ಇವುಗಳಿಗೆ ಸಂಬಂಧ ಪಟ್ಟ ವಿಷಯಗಳ ಹೊರತು ಯಾವುದೇ ವಿಷಯವೂ ಸಹ ಕೇಂದ್ರದ ವ್ಯಾಪ್ತಿಗೆ ಒಳಪಟ್ಟಿರಕೂಡದು. ಹೆಚ್ಚಿನ ಆಧಿಕಾರ ಸಂಪನ್ಮೂಲಗಳಿಂದ ತಮ್ಮದೇ ಆದ ರೀತಿಯಲ್ಲಿ ಅಭಿವೃದ್ಧಿ ಹೊಂದಲು ರಾಜ್ಯಗಳಿಗೆ ಕೇಂದ್ರವು ಸಹಾಯ ಮಾಡಬೇಕು.

ಕೈಗಾರಿಕೆ, ವಿದ್ಯುತ್ ಶಕ್ತಿ, ನಿರಾವರಿ ಯೋಜನೆ, ಮುಂತಾದ ರಂಗಗಳಲ್ಲಿ ಒಂದಕ್ಕಿಂತ ಹೆಚ್ಚಿನ ರಾಜ್ಯಗಳು ಒಳಗೊಳ್ಳುವ ವಿಷಯಗಳನ್ನು ಕೇಂದ್ರ ಪಟ್ಟಿಯಲ್ಲಿಯೇ ಇರಿಸಬೇಕು. ಅದರಿಂದ ಬಹು ರಾಜ್ಯ ಯೋಜನೆಗಳ ಬಗ್ಗೆ ಒಂದೇ ನೀತಿಯನ್ನೂ, ಅಂತಿಮ ನಿರ್ಣಯವನ್ನೂ ಕೇಂದ್ರ ಸರ್ಕಾರವು ತೆಗೆದುಕೊಳ್ಳಲು ಸಾಧ್ಯವಾಗುವುದು. ಆದರೆ ಅವುಗಳ ಕಾರ್ಯಾಚರಣೆ,

ನಿರ್ವಹಣೆಗಳು ರಾಜ್ಯ ಸರಕಾರಗಳಿಂದಲೇ ಆಗಬೇಕು.

ಕೈಗಾರಿಕೆಗಳ ಲೈಸೆನ್ಸಿಂಗ್ ಮುಂತಾದ ವಿಷಯಗಳಿಗೆ ಸಂಬಂಧ ಪಟ್ಟಂತೆ ಕೇಂದ್ರ ರಾಜ್ಯಗಳೊಳಗೆ ಅಧಿಕಾರದ ವಿತರಣೆಯಲ್ಲಿ ಪ್ರಮುಖ ಬದಲಾವಣೆಗಳಾಗಬೇಕಾಗಿವೆ. ಏಳನೇ 'ಶೆಡ್ಯೂಲಿ'ನಲ್ಲಿನ ವಿಷಯ ಪಟ್ಟ ಯನ್ನು ಪೂರ್ತಿಯಾಗಿ ಪುನರ್ರಚಿಸಿ ಅದರಿಂದ ಕೆಲವು ನಿರ್ಧಿಷ್ಟ ವರ್ಗದ ಕೈಗಾ ರಿಕೆಗಳ ಬಗ್ಗೆ ರಾಜ್ಯಕ್ಕೇ ಸಂಪೂರ್ಣ ಅಧಿಕಾರವನ್ನು ನೀಡಬೇಕು.

ಕೇಂದ್ರ ರಿಸರ್ವ ಪೋಲಿಸ್, ಅಥವಾ ಇನ್ನಾವುದೇ ಕೇಂದ್ರದ ಪೋಲಿಸ್ ದಳಗಳು ರಾಜ್ಯದಲ್ಲಿ ಕಾರ್ಯ ನಡೆಸುವ ಕೇಂದ್ರದ ಹಕ್ಕನ್ನು ತೆಗೆದುಹಾಕಬೇಕು. ಪೋಲಿಸ್ ಮತ್ತು ಕಾನೂನು ಶಿಸ್ತು ಪಾಲನೆ ವಿಷಯಗಳು ಪೂರ್ತಿಯಾಗಿ ರಾಜ್ಯ ಸರಕಾರದ ಅಧಿಕಾರ ವ್ಯಾಪ್ತಿಗಷ್ಟೇ ಒಳಪಟ್ಟಿದ್ದು, ಕೇಂದ್ರವು ತನ್ನದೇ ವಿಶೇಷ ದಳಗಳಿಂದ ಹಸ್ತಕ್ಷೇಪ ಮಾಡಬಾರದು.

ಹಣಕಾಸು ಆಯೋಗ (Finance Commission) ಮತ್ತು ಆದಾಯದ [revenue] ವಿತರಣೆಗೆ ಸಂಬಂಧಪಟ್ಟ ನಿಬಂಧನೆಯನ್ನು ತಿದ್ದು ಪಡಿಮಾಡಬೇಕು. ಅದರಿಂದ ಎಲ್ಲಾ ಮೂಲಗಳಿಂದಲೂ ಸಂಗ್ರಹಿಸಲ್ಪಟ್ಟ ಆದಾಯದ ಶೇ. ೭೫ ರಷ್ಟು ಭಾಗವನ್ನು ವಿವಿಧ ರಾಜ್ಯಗಳಿಗೆ ಹಂಚಲು ಹಣ ಕಾಸು ಆಯೋಗಕ್ಕೆ ನೀಡಬೇಕು. ರಾಜ್ಯಗಳ ತಿರುಪೆ ಸ್ಥಿತಿಯನ್ನು ನಿವಾರಿಸಲು ಇದು ಅತ್ಯಾವಷ್ಯಕ.

ಯಾವ ಪ್ರಮಾಣದಂತೆ, ಯಾವ ತತ್ವಗಳ ಮೇಲೆ ಈ ಶೇ. ೭೫ರಷ್ಟು ಭಾಗದ ಆದಾಯವನ್ನು ವಿತರಿಸಬೇಕೆನ್ನುವದನ್ನು ಹಣಕಾಸು ಆಯೋಗವೇ ನಿರ್ಧರಿಸಬೇಕು.

ಕೇಂದ್ರ ಮತ್ತು ರಾಜ್ಯಗಳ ನಡುವೆ ಆದಾಯದ ವಿತರಣೆಯ ಪ್ರಮಾಣವನ್ನು ನಿರ್ಧರಿಸುವುದು ಹಣಕಾಸು ಆಯೋಗದ ಕೆಲಸವಾಗಿರಬಾ ರದು. ಕೇಂದ್ರದ ಆದಾಯದ ಶೇ. ೭೫ರಷ್ಟು ಭಾಗದಲ್ಲಿ ಯಾವ ಯಾವ ರಾಜ್ಯಕ್ಕೆ ಎಷ್ಟೆಷ್ಟು ಸಲ್ಲಬೇಕೆಂದು ನಿರ್ಧರಿಸುವುದು ಮಾತ್ರ ಅದಕ್ಕೆ ಸಂಬಂಧಪಟ್ಟದ್ದು. ಹಾಗೆ ರಾಜ್ಯಗಳ ನಡುವಿನ ವಿತರಣೆಯನ್ನು ನಿರ್ಧರಿಸಿ ರಾಷ್ಟ್ರಪತಿಗೆ ಶಿಫಾರಸು ಮಾಡಲು ೨೮೦ ನೇ ನಿಬಂಧನೆಯ ೩ ನೇ ವಿಧಿಯ (clause) ಉಪವಿಧಿ

(Sub-clause) (a) ಯನ್ನು ತಿದ್ದುಪಡಿ ಮಾಡಬೇಕು. ಹಾಗೂ ಈ ಉಪವಿಧಿಯಿಂದ "the distribution between the Union and the States of the net proceeds of the taxes which are to be, or may be, divided between the Union and the States" ಎಂಬ ಪದಗಳನ್ನು ತೆಗೆದುಹಾಕಬೇಕು.

ತಾವೇ ಸ್ವತಃ ತೆರಿಗೆಯನ್ನು ಹಾಕಲು ಹಾಗೂ ತಮ್ಮ ಸಾರ್ವಜನಿಕರಿಂದ ಪಡೆಯುವ ಸಾಲದ[public borrowings] ಮಿತಿಯನ್ನು ನಿರ್ಧರಿಸಲು, ರಾಜ್ಯಗಳಿಗೆ ಹೆಚ್ಚು ಅಧಿಕಾರವನ್ನು ನೀಡಬೇಕು. ೨೮೦ ನೇ ನಿಭಂದನೆಯ ೨ ಮತ್ತು ೩ನೇ ವಿಧಿಗಳು ನೀಡುವ ರಾಜ್ಯಗಳ ಆದಾಯ ಮತ್ತು ಆಸ್ತಿಯ ಮೇಲೆ ತೆರಿಗೆ ಹಾಕುವ ಕೇಂದ್ರದ ಹಕ್ಕನ್ನು ತೆಗೆದುಹಾಕಬೇಕು. ೩೦೨ ನೇ ನಿಭಂದನೆಯು ನೀಡುವ, ವ್ಯಾಪಾರ ಮತ್ತು ವಾಣಿಜ್ಯಗಳ ಮೇಲೆ ನಿರ್ಭಂದಗಳನ್ನು ಹೇರಿ ರಾಜ್ಯದೊಳಗೆ ಹಸ್ತಕ್ಷೇಪ ಮಾಡುವ ಕೇಂದ್ರದ ಹಕ್ಕನ್ನು ತೆಗೆದುಹಾಕಬೇಕು. ಈ ಗುರಿಗಳ ಸಾಧನೆಗಾಗಿ ಸಂವಿಧಾನದ ಕೇಂದ್ರ, ರಾಜ್ಯ ಮತ್ತು ಸಂಗತ [ concurrent] ಪಟ್ಟಿಗಳನ್ನು ನಮೂದಿಸುವ ೭ನೇ ಶೆಡ್ಯೂಲನ್ನು ಸೂಕ್ತವಾಗಿ ತಿದ್ದುಪಡಿ ಮಾಡಬೇಕು.

ಒಂದು ರಾಜ್ಯದ ಸರಕಾರವನ್ನು, ಶಾಸಕಾಂಗವನ್ನು ಅಥವಾ ಒಟ್ಟಿಗೇ ಎರಡನ್ನೂ ರದ್ದುಪಡಿಸುವ ಅಧಿಕಾರವನ್ನು ರಾಷ್ಟ್ರಪತಿಗೆ ನೀಡುವ ೩೫೬ ಮತ್ತು ೩೫೭ ನೇ ನಿಭಂದನೆಗಳನ್ನು ತೆಗೆದುಹಾಕಬೇಕು. ಒಂದು ರಾಜ್ಯದಲ್ಲಿ ಸಂವಿಧಾನ ಬಿಕ್ಕಟ್ಟು ತಲೆದೋರಿದಾಗ ಕೇಂದ್ರಕ್ಕೆ ಅನ್ವಯಿಸುವಂತೆಯೇ, ಚುನಾವಣೆಗಳನ್ನು ನಡೆಸಿ ಹೊಸ ಸರಕಾರವನ್ನು ಸ್ಥಾಪಿಸುವಂತಹ ಪ್ರಜಾಸತ್ತಾತ್ಮಕ ಕ್ರಮಗಳಿಗೆ ಅವಕಾಶ ಮಾಡಿಕೊಡಬೇಕು. ಅದೇರೀತಿ ಹಣಕಾಸಿನ ಅಸ್ಥಿರತೆ, ಭಾರತದ ಘನತೆ ಮುಂತಾದ ನೆಪಮಾಡಿ ರಾಜ್ಯದ ಆಡಳಿತದಲ್ಲಿ ಕೈಹಾಕುವ ಅಧಿಕಾರವನ್ನು ರಾಷ್ಟ್ರಪತಿಗೆ ನೀಡುವ ೩೬೦ ನೇ ನಿಭಂದನೆಯನ್ನು ತೆಗೆದುಹಾಕಬೇಕು.

ವಿಧಾನ ಸಭೆಯಲ್ಲಿ ಅಂಗೀಕೃತವಾದ ಮಸೂದೆಗಳನ್ನು ರಾಷ್ಟ್ರಪತಿಯ ಸಮ್ಮತಿಗೆ ನೀಡಲು ನಿರ್ಧರಿಸುವ ಅಧಿಕಾರವನ್ನು ರಾಜ್ಯಪಾಲರಿಗೆ ನೀಡುವ

೨೦೦ ಮತ್ತು ೨೦೧ ನೇ ನಿಭಂದನೆಗಳನ್ನು ಕೈಬಿಡಬೇಕು. ರಾಜ್ಯದ ವಿಷಯಗಳ ಬಗ್ಗೆ ನಿರ್ಣಯ ಕೈಗೊಳ್ಳಲು ರಾಜ್ಯದ ಶಾಸಕಾಂಗವೇ ಅಂತಿಮವಾಗಿದ್ದು ಯಾವುದೇ ಆಧಾರದ ಮೇಲೆ ಕೇಂದ್ರದ ಹಸ್ತಕ್ಷೇಪಕ್ಕೆ ಅವಕಾಶವಿರಬಾರದು.

ಭಾರತ ಒಕ್ಕೂಟದ ಘಟಕಗಳ ಸಮಾನತೆಯನ್ನು ಧೃಢಪಡಿಸಲು ಹಾಗೂ ರಾಜ್ಯದ ಸ್ವಾಯತ್ತತೆಯನ್ನು ಕಾಪಾಡುವ ದೃಷ್ಟಿಯಿಂದಲೂ ಲೋಕಸಭಾ ಚುನಾವಣೆಯ ಜೊತೆಗೆ ರಾಜ್ಯ ಸಭೆಗೂ ಸಹ ಪ್ರತಿನಿಧಿಗಳು ನೇರವಾಗಿ ಜನತೆಯಿಂದಲೇ ಚುನಾಯಿಸಲ್ಪಡಬೇಕು. ಅಲ್ಲದೆ, ೩ ದಶಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯಿರುವ ರಾಷ್ಟ್ರಗಳನ್ನು ಬಿಟ್ಟು ಉಳಿದೆಲ್ಲಾ ರಾಜ್ಯಗಳಿಗೂ ರಾಜ್ಯಸಭೆಯಲ್ಲಿ ಸಮಾನ ಪ್ರಾತಿನಿಧ್ಯವಿರಬೇಕು. ಲೋಕಸಭೆ ಮತ್ತು ರಾಜ್ಯ ಸಭೆಗಳೆರಡಕ್ಕೂ ಸಮಾನ ಅಧಿಕಾರವಿರಬೇಕು.

ರಾಜ್ಯಗಳಲ್ಲಿ ನೇಮಿಸಲ್ಪಟ್ಟರೂ ಕೇಂದ್ರದ ಮೇಲ್ವಿಚಾರಣೆ ಮತ್ತು ಹಿಡಿತದಲ್ಲಿರುವ ಅಖಿಲಭಾರತ ಸೇವಾ ಹುದ್ದೆಗಳಾದ ಐ.ಎ.ಎಸ್, ಐ.ಪಿ. ಎಸ್, ಮುಂತಾದವುಗಳನ್ನು ರದ್ದುಪಡಿಸಬೇಕು. ಕೇಂದ್ರ ಸೇವಾ ಇಲಾಖೆ, ಮತ್ತು ರಾಜ್ಯಸೇವಾ ಇಲಾಖೆಗಳೆರಡೇ ಇದ್ದು ಅವುಗಳಿಗೆ ನೇಮಕಾತಿಗಳನ್ನು ಕ್ರಮವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದಲೇ ನಡೆಯಬೇಕು. ಕೇಂದ್ರ ಸೇವಾ ಇಲಾಖೆಯ ಸಿಬ್ಬಂಧಿಗಳು ಕೇಂದ್ರದ ಶಿಸ್ತುಬದ್ಧ ಮೇಲ್ವಿಚಾರಣೆಯಲ್ಲಿಯೂ, ರಾಜ್ಯಸೇವಾ ಇಲಾಖೆಯ ಸಿಬ್ಬಂಧಿಗಳು ಆಯಾ ರಾಜ್ಯ ಸರಕಾರಗಳ ಶಿಸ್ತುಬದ್ಧ ಮೇಲ್ವಿಚಾರಣೆಯಲ್ಲಿಯೂ ಇರಬೇಕು. ರಾಜ್ಯಸೇವಾ ಇಲಾಖೆಯಸಿಬ್ಬಂಧಿಗಳ ಮೇಲೆ ಕೇಂದ್ರಸರ್ಕಾರಕ್ಕೆ ಯಾವ ಅಧಿಕಾರವೂ ಇರಕೂಡದು.

ಪಾರ್ಲಿಮೆಂಟಿನ ಎರಡೂ ಸಭೆಗಳಲ್ಲೂ ಹಾಜರಿದ್ದ ಸದಸ್ಯರ ೨/೩ ರಷ್ಟು ಸದಸ್ಯರ ಸಮ್ಮತಿ ಇಲ್ಲದೇ ಯಾವ ಸಂವಿಧಾನ ತಿದ್ದುಪಡಿಯೂ ಸಾಧ್ಯವಾಗದಂತೆ ೩೬೮ ನೇ ನಿಭಂದನೆಯನ್ನು ತಿದ್ದುಪಡಿಮಾಡಬೇಕು.

ಒಂದು ರಾಜ್ಯದ ಕ್ಷೇತ್ರವನ್ನೇ ಕೇಂದ್ರವೇ ಏಕಪಕ್ಷೀಯವಾಗಿ ಬದಲಾಯಿಸುವ ಅಧಿಕಾರವನ್ನು ನೀಡುವ ಸಂವಿಧಾನದ ೩ ನೇ ನಿಭಂದನೆಯನ್ನು ಸೂಕ್ತವಾಗಿ ಬದಲಾವಣೆ ಮಾಡಿ, ಅದರಿಂದ ಆಯಾ ರಾಜ್ಯದ ಶಾಸಕಾಂಗದ ಒಪ್ಪಿಗೆಯಿಲ್ಲದೇ ಆರೀತಿ ಕ್ಷೇತ್ರವನ್ನು ಬದಲಾಯಿಸಲು ಕೇಂದ್ರಕ್ಕೆ ಸಾಧ್ಯವಾಗದಿ

ರುವಂತೆ ಖಚಿತಪಡಿಸಬೇಕು. ಭೂ ಭಾಗಕ್ಕೆ ಸಂಬಂಧಿಸಿದಂತೆ, ಎರಡು ಅಥವಾ ಎರಡಕ್ಕಿಂತ ಹೆಚ್ಚು ರಾಜ್ಯಗಳ ನಡುವೆ ವಿವಾದಗಳು ಏರ್ಪಟ್ಟಾಗ ಇತರೇ ವಿಷಯಗಳ ಮೇಲಿನ [ಉದಾ : ಅನೇಕ ರಾಜ್ಯಗಳಲ್ಲಿ ಹಾದು ಹೋಗುವ ನದಿಯ ನೀರಿನ ಬಳಕೆ] ವಿವಾದಗಳನ್ನು ಬಗೆಹರಿಸಲು ಇರುವ ಸಂವಿಧಾನಾತ್ಮಕ ರೀತಿಗಳಿಗನುಸಾರವಾಗಿಯೇ ಕ್ರಮಗಳನ್ನು ತೆಗೆದುಕೊಳ್ಳಬೇಕು.

೮ನೇ ಶೆಡ್ಯೂಲಿನಲ್ಲಿ ತೋರಿಸಲಾದ ಭಾಷೆಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಎಲ್ಲಾ ಹಂತಗಳ ಕಾರ್ಯಗಳಲ್ಲಿಯೂ ಬಳಸಲು ಅವಕಾಶವಿರಬೇಕು. ಸರ್ಕಾರದ ಉನ್ನತ ಹಂತದವರೆಗೂ ಸಹ ಯಾವ ಭಾರತೀಯ ಪ್ರಜೆಯೇ ಆಗಲಿ ತನ್ನ ವ್ಯವಹಾರಗಳನ್ನು ಮಾತೃಭಾಷೆಯಲ್ಲಿಯೇ ನಡೆಸುವ ಹಕ್ಕನ್ನು ಹೊಂದಿರಬೇಕು. ನೇಪಾಳಿ, ಮುಂತಾದ ಭಾಷೆಗಳನ್ನು ಒಳಗೊಳ್ಳುವ ಹಾಗೆ ೫ ನೇ ಶೆಡ್ಯೂಲನ್ನು ತಿದ್ದುಪಡಿ ಮಾಡುವ ಅವಶ್ಯಕತೆಯೂ ಇದೆ.

೩೭೦ ನೇ ನಿಬಂಧನೆಯ ಪ್ರಕಾರ ಕಾಶ್ಮೀರ ರಾಜ್ಯಕ್ಕೆ ನೀಡಲಾದ ವಿಶೇಷ ಅಂತಸ್ತನ್ನು ಉಳಿಸಿಕೊಳ್ಳಬೇಕು. ಈ ನಿಬಂಧನೆಯನ್ನು ಕಾಂಗ್ರೆಸ್ ಸರಕಾರ ಬಳಸಿದ ರೀತಿ ರಾಜ್ಯದ ಜನತೆಯಲ್ಲಿ ಅನುಮಾನ ಗೊಂದಲಗಳನ್ನು ಸೃಷ್ಟಿಸಿದೆ. ರಾಜ್ಯ ಸರಕಾರದ ಮುಖಂಡರು ಆಯಾ ರಾಜ್ಯ ಭಾರತದ ವ್ಯಾಪ್ತಿಯಲ್ಲಿಯೇ ಬರುವುದನ್ನು ಒತ್ತಿ ಹೇಳಿರುವಾಗ ಈ ಎಲ್ಲಾ ಅನುಮಾನಗಳನ್ನು ಕೂಡಲೇ ದೂರೀಕರಿಸಬೇಕು.



# ಕೇಂದ್ರ-ರಾಜ್ಯ ಸಂಬಂಧ

# ಸ್ವಾಯತ್ತ ರಾಜ್ಯಗಳೂ-ಬಲಿಷ್ಠ ಕೇಂದ್ರ

—ಇ. ಎಂ. ಎಸ್, ನಂಬೂದರಿಪಾಡ್

ಪ್ರಧಾನ ಮಂತ್ರಿಗಳು ಕೇಂದ್ರ-ರಾಜ್ಯ ಸಂಬಂಧದ ವಿಷಯವಾಗಿ ರಾಷ್ಟ್ರಮಟ್ಟದ ಚರ್ಚೆಯನ್ನು ಪೂರ್ತಿಯಾಗಿ ನಿರಾಕರಿಸಿದ್ದರೂ, ಕೆಲವು ವಾರಗಳಿಂದ ರಾಷ್ಟ್ರಮಟ್ಟದ ಚರ್ಚೆ ನಡೆಯುತ್ತಲೇ ಇದೆ.

ಹೆಚ್ಚಿನ ಎಲ್ಲಾ ಜನತಾ ಪಕ್ಷದ ರಾಜ್ಯ ಸರಕಾರಗಳು ರಾಷ್ಟ್ರಮಟ್ಟದ ಚರ್ಚೆಯ ಬೇಡಿಕೆಯನ್ನು ಬೆಂಬಲಿಸಿರುವುದು ಮಾತ್ರವಲ್ಲದೆ, ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆಯನ್ನು ನೀಡಲು ಸಂವಿಧಾನವನ್ನು ತಿದ್ದುಪಡಿ ಮಾಡಬೇಕೆಂಬ ಅಭಿಪ್ರಾಯವನ್ನೂ ಸಮ್ಮತಿಸಿವೆ.

ಕೇಂದ್ರ ಮತ್ತು ರಾಜ್ಯಗಳ ಆರ್ಥಿಕ ಸಂಬಂಧಗಳಿಗೆ ಸಂಬಂಧಿಸಿದ ಸಂವಿಧಾನದ ನಿಯಮಗಳನ್ನು ಪುನರ್ವಿಮರ್ಶಿಸಿ, ತಿದ್ದುಪಡಿಮಾಡಬೇಕೆಂಬ ನಿಲುಮೆಯುಳ್ಳ ಗುಜರಾತಿನ ಜನತಾ ಪಕ್ಷ ಸರಕಾರದ ಮುಖ್ಯಮಂತ್ರಿಯೂ, ಕೇಂದ್ರ ರಾಜ್ಯ ಸಂಬಂಧಗಳ ಬಗ್ಗೆ ಮಾತುಕತೆಗಳಾಗಬೇಕೆಂಬ ಬೇಡಿಕೆಯನ್ನು ಬೆಂಬಲಿಸುವ (ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆಯ ಪ್ರಶ್ನೆಯ ಬಗ್ಗೆ ಯಾವ ಅಭಿಪ್ರಾಯವನ್ನು ವ್ಯಕ್ತಪಡಿಸಿರದ್ದರೂ) ಜನತಾ ಪಕ್ಷದ ಅಧ್ಯಕ್ಷ ಶ್ರೀ ಚಂದ್ರಶೇಖರ್‌ರವರೂ, ಹಾಗೂ ರಾಷ್ಟ್ರಮಟ್ಟದ ಚರ್ಚೆಯನ್ನು ಸಮರ್ಥಿಸಿರುವುದಷ್ಟೇ ಅಲ್ಲದೆ, ಹೇಗೆ ರಾಜ್ಯಗಳು ತಮ್ಮ ಕಾರ್ಯನಿರ್ವಹಿಸುವುದಕ್ಕೆ ಕೇಂದ್ರೀಕರಣವು ಅಡ್ಡಿಯಾಗುತ್ತದೆ ಎಂದು, ಹಿಂದೆ ಮುಖ್ಯಮಂತ್ರಿಯಾಗಿದ್ದಾಗಿನ ತಮ್ಮ ವೈಯಕ್ತಿಕ ಅನುಭವಗಳನ್ನೇ ಉಧಾಹರಿಸಿ, ಸ್ವಾಯತ್ತತೆಯ ಬೇಡಿಕೆಯನ್ನು ಬೆಂಬಲಿಸಿರುವ ರಾಷ್ಟ್ರಪತಿ ಶ್ರೀ ಸಂಜೀವರೆಡ್ಡಿಯವರೂ ಸಹ ಈ ಚರ್ಚೆಯಲ್ಲಿ ಭಾಗವಹಿಸಿದಂತಾಗಿದೆ.

ಪ್ರಧಾನಿಯವರು ಪ್ರತಿನಿಧಿಸುವ ಕೇಂದ್ರ ಸರ್ಕಾರ ಮತ್ತು ದೇಶದ ಸಾರ್ವಜನಿಕರ ನಡುವೆ, ಕೇಂದ್ರ-ರಾಜ್ಯ ಸಂಬಂಧದ ಪ್ರಶ್ನೆಯ ಬಗ್ಗೆ ಹಿಂದೆಂದೂ ಸಹ, ಈ ಪ್ರಮಾಣದಲ್ಲಿ ವೈರುಧ್ಯತೆಗಳೇರ್ಪಟ್ಟಿರಲಿಲ್ಲ.

ಪ್ರಥಮವಾಗಿ ಪಶ್ಚಿಮಬಂಗಾಳ ಸರ್ಕಾರವು ಕೇಂದ್ರ-ರಾಜ್ಯ ಸಂಬಂಧಗಳ ಕುರಿತು ಸಲ್ಲಿಸಿದ ಮನವಿಯಲ್ಲಿ ಎತ್ತಿದ ಈ ಬೇಡಿಕೆಗೆ ವಿಶಾಲವಾದ ಜನ ಬೆಂಬಲವಿದ್ದರೂ ಸಹ, ಆಳುವ ಪಕ್ಷದ ಪ್ರಭಾವಯುತ ವಿಭಾಗದಿಂದಲೂ, ಹಾಗೂ ಅದಕ್ಕಿಂತಲೂ ವಿಶಾಲವಾದ ಸಾರ್ವಜನಿಕರಿಂದಲೂ ವಿರೋಧವು ವ್ಯಕ್ತಪಡಿಸಲ್ಪಟ್ಟದೆ ಎನ್ನುವುದನ್ನು ತಳ್ಳಿಹಾಕಲು ಸಾಧ್ಯವಿಲ್ಲ. ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡುವುದು ಭಾರತದ ಐಕ್ಯತೆಯ ಭಂಗಕ್ಕೂ, ದೇಶದ ಛಿದ್ರತೆಗೂ ಕಾರಣವಾಗುತ್ತದೆ ಎಂದು ವಾದಿಸಿ ಈ ಬೇಡಿಕೆಯನ್ನು ವಿರೋಧಿಸುತ್ತಿದ್ದಾರೆ.

ಈ ವಾದ ಸ್ವಾಭಾವಿಕವಾಗಿ ಭಾರತದ ಐಕ್ಯತೆಯನ್ನು ಪ್ರೀತಿಸುವ ಹಾಗೂ ಅದನ್ನು ಭಂಗಗೊಳಿಸುವ ಯಾವ ಶಕ್ತಿಯೂ ತಲೆ ಎತ್ತಕೂಡದಂತೆ ನೋಡಿಕೊಳ್ಳಬೇಕೆನ್ನುವ ಜನರ ಭಾವನೆಯನ್ನು ಕೆರಳಿಸುತ್ತದೆ. ಆದ್ದರಿಂದ ಇವರು ಆಪಾದಿಸುವ ಹಾಗೆ,ಪಶ್ಚಿಮಬಂಗಾಳ ಸರ್ಕಾರದ ಮನವಿಯಲ್ಲಿಯೂ, ಮತ್ತು ಹೆಚ್ಚಿನ ಸ್ವಾಯತ್ತತೆ ಬೇಡುವ ಇತರ ದಾಸ್ತಾವೇಜು [documents] ಗಳಲ್ಲಿಯೂ ಮಾಡಿದ ಸೂಚನೆಗಳು ಭಾರತದ ಐಕ್ಯತೆಗೆ ಭಂಗವನ್ನುಂಟು ಮಾಡುತ್ತವೆಯೇ ಎಂದು ಪರೀಕ್ಷಿಸುವುದು ಅವಶ್ಯಕವಾಗಿದೆ.

## ಸ್ವಾಯತ್ತ ರಾಜ್ಯಗಳೂ-ಬಲಿಷ್ಠ ಕೇಂದ್ರ ಸರಕಾರ.

ಮೊಟ್ಟ ಮೊದಲನೆಯದಾಗಿ, ಪಶ್ಚಿಮ ಬಂಗಾಳ ಸರಕಾರದ ಮನವಿಯೂ ಹಾಗೂ ಇತರ ಎಲ್ಲಾ ದಾಸ್ತಾವೇಜುಗಳೂ (documents) ಸಹ, ದೇಶದ ಆಡಳಿತದ ಮುಖ್ಯ ವಿಭಾಗಗಳು ಕೇಂದ್ರ ಸರ್ಕಾರಕ್ಕೊಳಪಡಬೇಕೆ ವಿನಾ ರಾಜ್ಯಕ್ಕಲ್ಲವೆಂದು ಸೂಚಿಸಿವೆ ಎನ್ನುವುದನ್ನು ಅರಿತುಕೊಳ್ಳಬೇಕು. ದೇಶದ ರಕ್ಷಣೆ, ವಿದೇಶಿ ವ್ಯಾಪಾರ, ಸಂಪರ್ಕ, ಹಣ (currency) ಹಾಗೂ ಆರ್ಥಿಕ ಸಮನ್ವಯತೆ, (economic co-ordination) ಈ ಎಲ್ಲಾ ಕಾರ್ಯಗಳೂ ಕೇಂದ್ರದ ಅಧಿಕಾರಕ್ಕೊಳಪಡಬೇಕೆಂದು ರಾಜ್ಯ ಸ್ವಾಯತ್ತತೆಯನ್ನು ಬೆಂಬಲಿಸುವವರೆಲ್ಲರೂ ಸೂಚಿಸಿದ್ದಾರೆ.

ಈ ಮುಖ್ಯ ವಿಷಯಗಳ ಮೇಲೆ ಪೂರ್ಣ ಅಧಿಕಾರ ಹೊಂದುವ ಕೇಂದ್ರ ಸರಕಾರ "ಬಲಹೀನ" ವಾಗಿರುತ್ತದೆಂದು ಪೂರ್ವಗ್ರಹ ಪೀಡೆಗಳಿಲ್ಲದ ಯಾರಿಗೇ ಆಗಲಿ ಕಲ್ಪಿಸಿಕೊಳ್ಳಲು ಸಾಧ್ಯವೇ ? ಇವುಗಳನ್ನು ಬಿಟ್ಟು ಉಳಿದ ವಿಷಯುಗಳ ಆಡಳಿತವು [ಉಳಿಕೆ ಅಧಿಕಾರ (residuary powers) ಗಳನ್ನೂ ಒಳಗೊಂಡಂತೆ] ರಾಜ್ಯ ಸರಕಾರದ ಅಧಿಕಾರಕ್ಕೊಳಪಡಬೇಕೆಂದು ಸಂವಿಧಾನದಲ್ಲಿ ಸ್ಪಷ್ಟವಾಗಿ ಹೇಳದ ಹೊರತು, ಸರ್ವಾಧಿಕಾರದೆಡೆಗೆ ಸಾಗುತ್ತಿರುವ ಕೇಂದ್ರ ಸರಕಾರ ತನ್ನನ್ನು ಮತ್ತಷ್ಟು ಬಲಗೊಳಿಸಿಕೊಳ್ಳಲು ರಾಜ್ಯದ ಅಧಿಕಾರಗಳನ್ನು ಕಸಿದುಕೊಳ್ಳುತ್ತಾ ಹೋಗುತ್ತದೆ ಎನ್ನುವುದು ಸತ್ಯವಲ್ಲವೇ ?

ರಕ್ಷಣೆ, ಸಂಪರ್ಕ, ಎಲ್ಲಕ್ಕಿಂತ ಮಿಗಿಲಾಗಿ ಆರ್ಥಿಕ ಸಮ್ವಯತೆಯ ಮೇಲೆ ಅಧಿಕಾರವನ್ನು ಚಲಾಯಿಸುವ ನೆಪದಲ್ಲಿ, ಅಧಿಕಾರ ದಾಹದ ಕೇಂದ್ರ ಸರ್ಕಾರವೊಂದು ರಾಜ್ಯ ಸರಕಾರಗಳ ಅಜಾಗರೂಕತೆಯಲ್ಲಿ, ರಾಜ್ಯದ ಅಧಿಕಾರದ ಮೇಲೆಯೇ ಅತಿಕ್ರಮಿಸುವ ಹಾಗೆ ಸಂವಿಧಾನದ ನಿಯಮಗಳನ್ನು ಅರ್ಥೈಸಬಹುದು. ಮೂವತ್ತು ವರ್ಷಗಳವರೆಗೆ, ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್ ಸರಕಾರ, ರಾಜ್ಯಗಳಿಲ್ಲಿಯೂ ಕಾಂಗ್ರೆಸ್ ಸರಕಾರಗಳೇ ಇರಲು, ೧೯೫೦ ರಲ್ಲಿ ಅಳವಡಿಸಿದ ಸಂವಿಧಾನ ರೀತ್ಯ ಇದ್ದ ರಾಜ್ಯಗಳ ಅಧಿಕಾರಗಳ ಮೇಲೆ ಹೇಗೆಅತಿಕ್ರಮಿಸಿದೆಯೆಂದು ನಾವು ನೋಡಿದ್ದೇವೆ.ಅಂತಹ ಅತಿಕ್ರಮಣಗಳು ಪುನಃ ಆಗದಂತಾಗಲು, ಕೇಂದ್ರ ರಾಜ್ಯ ಸಂಬಂಧದ ಬಗೆಗಿನ ಸಂವಿಧಾನದ ರಚನೆಯನ್ನೇ ಮೂಲಭೂತವಾಗಿ ಬದಲಾಯಿಸಬೇಕು.

## 'ಬಲಿಷ್ಠ ಕೇಂದ್ರ'ದ ವಾದ

ರಾಜ್ಯಗಳ ಸ್ವಾಯತ್ತತೆಯನ್ನು ವಿರೋಧಿಸಿ "ಬಲಿಷ್ಠ ಕೇಂದ್ರ"ಕ್ಕಾಗಿ ವಾದಿಸುವವರಲ್ಲಿ ಜನತಾ ಪಕ್ಷದ ಮುಖಂಡರುಗಳೂ (ಪ್ರಧಾನ ಮಂತ್ರಿಯೂ ಸೇರಿ) ಸೇರಿರುವುದು ಆಶ್ಚರ್ಯಕರವಾಗಿದೆ. ಏಕೆಂದರೆ ಆ ಪಕ್ಷ ಅಧಿಕಾರದ ವಿಕೇಂದ್ರೀಕರಣ ತತ್ವಕ್ಕೆ ಬದ್ಧವಾಗಿದೆ ಎಂದು ಹೇಳಿತ್ತು. ಯಾವ ರೀತಿಯಲ್ಲಿ ರಾಜ್ಯದ ಅಧಿಕಾರವನ್ನು ಜಿಲ್ಲೆ ಮತ್ತು ಪಂಚಾಯತ ಮಟ್ಟಗಳಿಗೆ ವಿಕೇಂದ್ರೀಕ

ರಿಸಬೇಕೆಂಬುದನ್ನು ಪರೀಕ್ಷಿಸಲು ಜನತಾ ಸರ್ಕಾರವೇ ಒಂದು ಸಮಿತಿಯನ್ನು ನೇಮಿಸಿದೆ.

ಆದ್ದರಿಂದ ಜನತಾ ಪಕ್ಷದ ಮುಖಂಡರ ವಾದ ಈ ರೀತಿ ಇದೆ: ಈಗ ರಾಜ್ಯ ಸರ್ಕಾರಕ್ಕಿರುವ ಅಧಿಕಾರಗಳನ್ನು ಜಿಲ್ಲೆ ಮತ್ತು ಕೆಳಮಟ್ಟದ ಆಡಳಿತ ಮಂಡಳಿಗಳಿಗೆ ವರ್ಗಾಯಿಸಲ್ಪಡಬೇಕು. ಆದರೆ ಕೇಂದ್ರದಿಂದ ರಾಜ್ಯಕ್ಕೆ ಅಂಥ ಅಧಿಕಾರ ವರ್ಗಾವಣೆಗಳಾವುದೂ ಆಗಕೂಡದು. ಕೇಂದ್ರೀಕರಣ, ವಿಕೇಂದ್ರೀಕರಣ ಪ್ರಶ್ನೆಗೆ ಅವರ ದೃಷ್ಟಿಕೋನದಲ್ಲಿರುವ ಈವಿರೋಧಾಭಾಸವೇ ಅವರ "ಬಲಿಷ್ಠ ಕೇಂದ್ರ" ಸಿದ್ಧಾಂತದ ಟೊಳ್ಳುತನವನ್ನು ಎತ್ತಿ ತೋರಿಸುತ್ತದೆ.

ರಾಜ್ಯಗಳ ಸ್ವಾಯತ್ತತೆಯನ್ನು ಪ್ರತಿಪಾದಿಸುವವರು ಅವರ ವಿರೋಧಿಗಳು ಆಪಾದಿಸುವ ಹಾಗೆ ಭಾರತದ ಛಿದ್ರತೆಯನ್ನು ಸಮರ್ಥಿಸುವವರೇನೂ ಅಲ್ಲ. ಬದಲು ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡುವುದು ಭಾರತದ ಐಕ್ಯತೆಯನ್ನು ಬಲಗೊಳಿಸುವುದಕ್ಕೂ, ಸಂರಕ್ಷಿಸುವುದಕ್ಕೂ ಸಹಾಯಕವಾಗುತ್ತದೆ ಎಂದೇ ಅವರ ವಾದವಾಗಿದೆ ನಮ್ಮ ಹಿಂದಿನ ಇತಿಹಾಸವೇ ತೋರಿಸಿದಂತೆ ರಾಜ್ಯಗಳ ಸ್ವಾಯತ್ತತೆಯನ್ನು ವಿರೋಧಿಸುವವರು ಕಲ್ಪಿಸಿಕೊಳ್ಳುವ "ಬಲಿಷ್ಠ ಕೇಂದ್ರ"ವನ್ನು ಸ್ಥಾಪಿಸುವ ಯಾವುದೇ ಪ್ರಯತ್ನವೂ ವಿಚ್ಛಿದ್ರಕಾರಿ ಶಕ್ತಿಗಳನ್ನು ಬೆಳೆಯಿಸುತ್ತದೆ.

## ಸಂಯುಕ್ತ ಸ್ವರೂಪ ವ್ಯವಸ್ಥೆಯ (federal) ತತ್ವಗಳ ಇತಿಹಾಸ

ಸ್ವಾಯತ್ತತೆಯ ಪ್ರಶ್ನೆಯು ೧೯೭೭ ರಲ್ಲಿ ಪಶ್ಚಿಮ ಬಂಗಾಳ ಸರ್ಕಾರವು ಕೇಂದ್ರ-ರಾಜ್ಯ ಸಂಬಂಧದ ಬಗ್ಗೆ ಸಲ್ಲಿಸಿದ ಮನವಿಯಿಂದಲೇ ಉದ್ಭವಿಸಿದ್ದುದೇನೂ ಅಲ್ಲ. ವಾಸ್ತವವಾಗಿ ಭಾರತದ ವಿಭಜನೆಯ ಪೂರ್ವಕಾಲದಲ್ಲಿ ಜನತೆಯು ಸ್ವಾತಂತ್ರ್ಯಕ್ಕಾಗಿ ಬ್ರಿಟಿಷ್‌ರ ವಿರುದ್ಧ ಹೋರಾಡುವಾಗಿನ ದಿನಗಳಲ್ಲಿಯೂ ಈ ಪ್ರಶ್ನೆ ಪ್ರಾಮುಖ್ಯವಾಗಿದ್ದಿತು. ಸ್ವತಂತ್ರ ಭಾರತದ ಸಂವಿಧಾನದ ರಚನೆಯು ಸಂಯುಕ್ತ ಸ್ವರೂಪ ವ್ಯವಸ್ಥೆಯ (federal) ತತ್ವಗಳ ಆಧಾರದ ಮೇಲಾಗಿರಬೇಕೇ, ಅಥವಾ ಏಕಾತ್ಮಕ (unitary) ತತ್ವಗಳ ಆಧಾರದ

ಮೇಲಾಗಿರಬೇಕೇ ಹಾಗೂ "ಉಳಿಕೆ ಅಧಿಕಾರ" (residuary powers) ಕೇಂದ್ರದಲ್ಲಿರಬೇಕೇ, ಅಥವಾ ರಾಜ್ಯಗಳಿಗಿರಬೇಕೇ, ಎಂದು, ಕಾಂಗ್ರೆಸ್, ದಿ ಲಿಬರಲ್ ಫೆಡರೇಷನ್, ಮತ್ತು ಇತರ ಪಕ್ಷಗಳು ಒಂದೆಡೆಗೂ, ಮುಸ್ಲಿಂ ಲೀಗ್ ಇನ್ನೊಂದೆಡೆಗೂ ನಡುವೆ ಧೀರ್ಘಕಾಲದ ಚರ್ಚೆ ನಡೆದಿತ್ತು.

ಈ ಧೀರ್ಘಕಾಲದ ಚರ್ಚೆಯ ಪರಿಣಾಮವಾಗಿ ೧೯೧೬ರಲ್ಲಿ ಪ್ರಸಿದ್ಧ ಲಕ್ನೋ ಒಪ್ಪಂದಕ್ಕೆ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ಗಳೆರಡೂ ಸಹಿ ಹಾಕುವು ದರಿಂದ ಸಂಯುಕ್ತ ಸ್ವರೂಪ ರಚನೆ (federal structure) ಯು ಪರ ವಾಗಿ ನಿರ್ಧರಿತಗೊಂಡಿತು. ಸ್ವತಂತ್ರ ಭಾರತದ ಸಂವಿಧಾನದ ರಚನೆ ಸಂಯುಕ್ತ ಸ್ವರೂಪದ ತತ್ವಗಳ (federal principles) ಆಧಾರದ ಮೇಲಿರಬೇ ಕೆಂದು ಒಪ್ಪಿಕೊಳ್ಳಲಾಗಿತ್ತು.

೧೯೪೭ ರ ವರೆಗೂ ಇದನ್ನೇ ಪುನರುಚ್ಚರಿಸಲಾಗಿತ್ತು. ಪಂಡಿತ್ ಮೋತಿಲಾಲ್‌ನೆಹರೂ ಅವರು ಅಧ್ಯಕ್ಷರಾಗಿದ್ದ ಸರ್ವಪಕ್ಷಗಳ ಸಮಿತಿಯ ಚರ್ಚೆ ಯಲ್ಲಿಯೂ, ಸಂವಿಧಾನದ ಬಗ್ಗೆ ನಂತರ ನಡೆದ ದುಂಡುಮೇಜಿನ ಪರಿಷತ್ತು ಮತ್ತು ೧೯೪೭ ರ ಅಧಿಕಾರ ವರ್ಗಾವಣೆಗೆ ಮುಂಚೆ ನಡೆದ ಎಲ್ಲಾ ಚರ್ಚೆಗಳ ಲ್ಲಿಯೂ ರಾಜ್ಯಗಳ ಸ್ವಾಯತ್ತತೆ ಅಥವಾ ಸ್ವಾತಂತ್ರ್ಯ ಪೂರ್ವದಲ್ಲಿ ಕರೆಯು ತ್ತಿದ್ದ ಹಾಗೆ ಸಂಸ್ಥಾನ ಸ್ವಾಯತ್ತತೆ (provincial autonomy) ಸ್ವತಂತ್ರ ಭಾರತದ ಸಂವಿಧಾನದ ಅವಿಭಾಜ್ಯ ಅಂಗವೆಂದು ಪರಿಗಣಿಸಲ್ಪಟ್ಟಿತ್ತು.

ಆದ್ದರಿಂದಲೇ ಸಂವಿಧಾನ ಸಭೆ (Constituent Assembly) ಯಲ್ಲಿ ಸ್ವತಂತ್ರ ಭಾರತದ ಸಂವಿಧಾನವು ಉದಯವಾದಾಗ ಸಂಯುಕ್ತ ಸ್ವರೂಪ ತತ್ವಗಳ ಆಧಾರದ ಮೇಲೆ ಶಿಕ್ಷಣ, ಕೃಷಿ, ಮುಂತಾದ ಅನೇಕ ಪ್ರಮುಖ ಆಡ ಳಿತ ರಂಗಗಳಲ್ಲಿ ರಾಜ್ಯಗಳು ಸ್ವತಂತ್ರ ಅಧಿಕಾರ ಹೊಂದಿರುವ ಹಾಗೆ ಬರೆಯಲ್ಪ ಟ್ಟಿರುವುದು ಆಶ್ಚರ್ಯವೇನೂ ಅಲ್ಲ. ಆದಾಗ್ಯೂ ಆಕಸ್ಮಿಕವಾಗಿ ಸ್ವಾತಂತ್ರ್ಯ ಪೂರ್ವದ ಸಂಯುಕ್ತ ಸ್ವರೂಪ ರಚನೆಯ ಒಪ್ಪಂದಗಳು ಆವಾಗಿನ ಹಿಂದೂ-ಮುಸ್ಲಿಂ ಪ್ರಶ್ನೆಯ ಆಧಾರದ ಮೇಲಷ್ಟೇ ಸಂಭವಿಸಿದ್ದವು.

ಮುಸ್ಲಿಂ ಸಮುದಾಯವು ಒಟ್ಟೂ ದೇಶದಲ್ಲಿ ಅಲ್ಪಸಂಖ್ಯಾತರಾಗಿ ರುವುದರಿಂದಲೂ ಹಾಗೂ ಅನೇಕ ರಾಜ್ಯಗಳಲ್ಲಿ ಬಹುಸಂಖ್ಯಾತರಾಗಿ ಇರುವು

ದರಿಂದಲೂ, ರಾಜ್ಯಕ್ಕೆ (ಆವಾಗ ಕರೆಯುತ್ತಿದ್ದ ಹಾಗೆ ಸಂಸ್ಥಾನಕ್ಕೆ) ಹೆಚ್ಚಿನ ಅಧಿಕಾರವಿರುವ ಸಂಯುಕ್ತ ಸ್ವರೂಪ ವ್ಯವಸ್ಥೆಯು ಹಿಂದೂ ಕೋಮಿನ ಪ್ರಾಬಲ್ಯದ ವಿರುದ್ಧ ತಮ್ಮ ಹಕ್ಕುಗಳನ್ನು ಬಳಸಿಕೊಳ್ಳಲು ಸಹಾಯಕವಾಗುವದೆಂದು ಯೋಚಿಸಿದ್ದರು. ಕಾಂಗ್ರೆಸ್, ದಿ ಲಿಬರಲ್ ಫೆಡರೇಷನ್, ಹಾಗೂ ಇತರೆ ಸಂಘಟನೆಗಳು ಸ್ವಾತಂತ್ರ್ಯಾನಂತರ ದೇಶವು ಬಲಿಷ್ಠವಾಗಲೂ, ಶ್ರೀಮಂತವಾಗಲೂ, ಏಕಾತ್ಮಕ (unitary) ವ್ಯವಸ್ಥೆಯು ಸಹಾಯವಾಗುವುವೆಂದು ಭಾವಿಸಿದ್ದರು. ಆದರೂ ಆವಾಗ ಬ್ರಿಟಿಷ್ ಆಡಳಿತಗಾರರ ವಿರುದ್ಧ ಹೋರಾಡಲು ಸಂಯುಕ್ತ ರಂಗದಲ್ಲಿ ಮುಸ್ಲಿಮರನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ರಾಜಿ ಮಾಡಿಕೊಳ್ಳಲು ತಯಾರಾಗಿದ್ದರು.

ಆದರೆ ಭಾರತವನ್ನು ಒಂದಾಗಿಯೇ ಇಡಲು ಸರ್ವಪ್ರಯತ್ನಗಳನ್ನು ನಡೆಸಿದರೂ ಸಹ, ಮುಸ್ಲಿಂಲೀಗ್ ಹಠಹಿಡಿದು ತಮ್ಮ ರಾಜ್ಯವನ್ನು. ಪಾಕಿಸ್ತಾನ, ಪಡೆದುಕೊಂಡದ್ದರಿಂದ ಸ್ವಾತಂತ್ರ್ಯಾನಂತರ ಈಪ್ರಶ್ನೆಯು ಸಂವಿಧಾನ ರಚನಾಕಾರರ ಮೇಲೆಪ್ರಭಾವ ಬೀರಲಿಲ್ಲ. ಈ ಹಿನ್ನೆಲೆಯಲ್ಲಿ ಸಂವಿಧಾನವನ್ನು ಬರೆಯುವಾಗ ಸಂವಿಧಾನ ಸಭೆಯು (Constituent Assembly) ಸಂಯುಕ್ತ ಸ್ವರೂಪ ವ್ಯವಸ್ಥೆಯ ವಿಚಾರಗಳಿಗೆ ಬಾಯಿಮಾತಿನ ಗೌರವಗಳನ್ನು ಮಾತ್ರ ಕೊಡುವ ಪ್ರಸಂಗಕ್ಕೆ ಬಂದು ಮುಟ್ಟಿತು. ಮುಸ್ಲಿಂ ಲೀಗಿನ ಒತ್ತಡವಿಲ್ಲದ ಪರಿಸ್ಥಿತಿಯಲ್ಲಿ, ಕಾಂಗ್ರೆಸ್ ಮತ್ತು ಏಕಾತ್ಮಕ (unitary) ವ್ಯವಸ್ಥೆಗೆ ಮೋಹಗೊಂಡಿದ್ದ ಸಂವಿಧಾನ ರಚನಾಕಾರರಿಗೆ ತಮ್ಮ ಪೂರ್ವ ವಿಚಾರಗಳನ್ನು ಬಿಟ್ಟುಕೊಡಲು ಕಷ್ಟಕರವಾಗಿ ಸಂಯುಕ್ತ ಸ್ವರೂಪ ರಚನೆಯು ಒಳಗೆ ಸಾಧ್ಯವಾದಷ್ಟು ಏಕಾತ್ಮಕ (unitary) ರಚನೆಯ ಅಂಶಗಳನ್ನು ತಂದು ಸೇರಿಸಿದರು.

ಮತ್ತೆ ಮೂವತ್ತು ವರ್ಷಗಳ ಕಾಂಗ್ರೆಸ್ ಆಡಳಿತದಲ್ಲಿ ರಾಜ್ಯ ಸ್ವಾಯತ್ತತೆಯ ಮೇಲೆ ಮಾಡಿದ ಅತಿಕ್ರಮಣದಿಂದಾಗಿ ಸಂವಿಧಾನವು ರೂಪದಲ್ಲಿ ಮಾತ್ರ ಸಂಯುಕ್ತ ಸ್ವರೂಪ ರಚನೆಯಂತಿದ್ದು ವಾಸ್ತವವಾಗಿ ಏಕಾತ್ಮಕ (unitary) ವಾಗಿ ಪರಿವರ್ತನೆಗೊಂಡಿದೆ. ನಂತರದಲ್ಲಿ ಹಿಂದೂ ಮುಸ್ಲಿಂ ಪ್ರಶ್ನೆ ಪ್ರಾಮುಖ್ಯವಾಗದಿದ್ದರೂ,ಆದರಿಂದಸಂವಿಧಾನ ರಚನಾಕಾರರ ಮೇಲೂ,

ನಂತರ ಆಳುವ ಪಕ್ಷದ ಮೇಲೂ ಪ್ರಭಾವ ಬೀರದಿದ್ದರೂ, ಈ ಸಂವಿಧಾನದ ಕಾರ್ಯಾಚರಣೆಯು, ರಾಜ್ಯ ಸ್ವಾಯತ್ತತೆಯನ್ನು ಬೇಡುವ ಇತರೆ ಶಕ್ತಿಗಳನ್ನು ಉಂಟುಮಾಡಿತು. ಇವು ಅನೇಕ ಸಂದರ್ಭಗಳಲ್ಲಿ ಅದಮ್ಯ ಶಕ್ತಿಗಳ ರೂಪದಲ್ಲಿ ಕಾಣಿಸಿಕೊಂಡವು.

## ಭಾಷಾ ಪ್ರಶ್ನೆ-ಭಾರತದ ಐಕ್ಯತೆ

ಆಡಳಿತ ಭಾಷಾ ಪ್ರಶ್ನೆಯನ್ನೇ ತೆಗೆದುಕೊಳ್ಳಿ. ಇದರ ಬಗ್ಗೆ ಅನೇಕ ವಿಕಾರಕಾರಕ ಪ್ರವೃತ್ತಿಗಳು ಬೆಳೆದು ಬಂದು ಹಿಂದಿಯೇತರ ಪ್ರದೇಶಗಳಲ್ಲಿ ಹಿಂಸಾಚಾರಗಳೂ ನಡೆದವು. ಭಾಷಾಪ್ರಶ್ನೆ ಇಂದಿಗೂ ಆಸ್ಫೋಟಕ ವಿಷಯ ವಾಗಿದ್ದು ಯಾವುದೇ ಸಮಯದಲ್ಲಿ ಯಾವುದೇ ಪ್ರದೇಶದಲ್ಲಿ, ಉದ್ರೇಕಗಳಿಗೆ ಎಡೆ ಮಾಡಿಕೊಡಬಹುದು. ಈ ತೀವ್ರತರವಾದ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯದೆ, ಭಾರತದ ಐಕ್ಯತೆಯನ್ನು ಬಲಗೊಳಿಸುವ, ಸಂರಕ್ಷಿಸುವುದರ ಬಗ್ಗೆ ಮಾತಾಡುವುದು ಶುದ್ಧ ವ್ಯರ್ಥ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಭಲ್ಯವಾಗಿದ್ದ ನಾಯಕತ್ವವು ಬ್ರಿಟಿಷ್ ಆಡಳಿತಗಾರರಿಂದ "ಏಕಭಾಷೆ" ಯ ಪರಿಕಲ್ಪನೆಯನ್ನು ಪಡೆದು ಕೊಂಡು ಬಂದಿದೆ. ಬ್ರಿಟಿಷ್ ಆಡಳಿತಗಾರರು ತಮಗೆ ದೇಶದಲ್ಲಿನ ವಿವಿಧ ಭಾಷಾವಾರು, ಸಾಂಸ್ಕೃತಿಕ, ಸಾಮಾಜಿಕ ಸಮುದಾಯಗಳನ್ನು ಒಕ್ಕೂಡಿಸಲು ಸಾಧ್ಯವಾಯಿತೆಂದು ಜಂಬ ಕೊಚ್ಚಿಕೊಳ್ಳುತ್ತಿದ್ದರು. ತಮ್ಮ ಭಾಷೆಯನ್ನು ಒಕ್ಕೂಡಿಸುವ ಶಕ್ತಿಯನ್ನಾಗಿ ನೋಡಿ, ಎಲ್ಲಾ ಆಡಳಿತ, ಶೈಕ್ಷಣಿಕ, ಸಾಂಸ್ಕೃತಿಕ ಉದ್ದೇಶಗಳಿಗೂ ಕೇಂದ್ರ ಮತ್ತು ರಾಜ್ಯಗಳೆರಡರಲ್ಲಿಯೂ ಬಳಸುವಂತೆ ಮಾಡಿದರು.

ರಾಷ್ಟ್ರೀಯ ಚಳುವಳಿಯ ನಾಯಕರುಗಳು, ಒಕ್ಕೂಡಿಸುವ ಶಕ್ತಿ ಯಾಗಿ ಏಕೈಕ ಆಡಳಿತ ಭಾಷೆಯಿರಬೇಕೆನ್ನುವುದರ ಬಗ್ಗೆ ಬ್ರಿಟಿಷ್ ಅಭಿಪ್ರಾ ಯವನ್ನೇ ಹೊಂದಿದ್ದರು. ಎಲ್ಲಾ ಆಡಳಿತ,ಶೈಕ್ಷಣಿಕ, ಸಾಂಸ್ಕೃತಿಕ ಉದ್ದೇಶಗಳಿಗೆ ಒಂದೇ ಭಾಷೆಯಿರಬೇಕೆಂದು ಬೇಡಿಕೊಂಡಿದ್ದರು. ಆದರೆ ಅವರೂ ಸಹ

ಎರಡು ಗುಂಪುಗಳಾಗಿ ವಿಭಜನೆಗೊಂಡಿದ್ದರು. ಒಂದು ಗುಂಪು, ಹಿಂದಿಯು ಇಂಗ್ಲೀಷನ್ನು ಸ್ಥಾನಪಲ್ಲಟಗೊಳಿಸಬೇಕೆಂದೂ, ಇನ್ನೊಂದು, ಇಂಗ್ಲೀಷ್ ಭಾಷೆಯೇ ಮುಂದುವರಿಯಬೇಕೆಂದೂ ವಾದಿಸುತ್ತಿದ್ದವು.

ಈ ಎರಡು ಗುಂಪುಗಳ ನಡುವೆ ಸಂವಿಧಾನ ಸಭೆಯಲ್ಲಿ ಬಿಸಿ ಬಿಸಿ ವಾಗ್ಯುದ್ಧಗಳಾಗಿ, ಕಟ್ಟಕಡೆಗೆ ಒಂದು ರಾಜಿ ಸೂತ್ರಕ್ಕೆ ಬರಲಾಯಿತು. ಅದೇನೆಂದರೆ, ಸಂವಿಧಾನ ಅಳವಡಿಸಿದ ೧೫ ವರ್ಷಗಳವರೆಗೂ ಇಂಗ್ಲೀಷ್ ಮತ್ತು ಹಿಂದಿ ಭಾಷೆಗಳೆರಡೂ ಕೇಂದ್ರದ ಆಡಳಿತ, ಶೈಕ್ಷಣಿಕ, ಭಾಷೆಗಳಾಗಿ ಸಮಾನ ಸ್ಥಾನವನ್ನು ಹೊಂದಿರಬೇಕು; ೧೫ ವರ್ಷಗಳ ನಂತರ ಹಿಂದಿಯೇ ಏಕೈಕ ಆಡಳಿತ, ಶೈಕ್ಷಣಿಕ ಭಾಷೆಯಾಗಬೇಕು ಎನ್ನುವುದು.

೧೫ ವರ್ಷಗಳ ನಂತರ ಈ ರಾಜಿಸೂತ್ರದ ಲೊಡ್ಡುತನ ಪೂರ್ತಿಯಾಗಿ ಬಯಲಿಗೆ ಬಂದಿತು. ಹಿಂದಿಯೇತರ ಜನತೆ ಹಿಂದಿಯ ಒತ್ತಾಯ ಹೇರಿಕೆಯನ್ನು ವಿರೋಧಿಸಿದರು. ಜನತೆಯ ಭಾವನೆಗಳು ಎಷ್ಟು ಪ್ರಭಾವಯುತವಾಗಿದ್ದವೆಂದರೆ, ಆಗಿನ ಪ್ರಧಾನಿ ಶ್ರೀ ಜವಾಹರಲಾಲ್ ನೆಹರೂರವರೆ, ಹಿಂದಿಯನ್ನು ಹೇರುವ ಸಂವಿಧಾನದ ನಿಯಮಗಳನ್ನು ಜಾರಿಗೆ ತರುವ ದಿನಗಳನ್ನು ಹಿಂದಿಯೇತರ ಜನತೆ ಸ್ವಯಂ ಇಚ್ಛೆಯಿಂದ ಒಪ್ಪಿಕೊಳ್ಳುವವರೆಗೆ, ಮುಂದೂಡುವುದನ್ನು ಒಪ್ಪಿಕೊಳ್ಳಬೇಕಾಯಿತು. ಅಲ್ಲಿಯವರೆಗೆ ಇಂಗ್ಲೀಷ್‌ನ್ನು ಮುಂದುವರಿಸುವದನ್ನೂ, ಹಿಂದಿ ಮತ್ತು ಇಂಗ್ಲೀಷ್‌ಗಳೆರಡೂ ಕೇಂದ್ರದಲ್ಲಿ ಆಡಳಿತ ಉದ್ದೇಶಗಳಿಗೆ ಬಳಸಲು ಅನುಮತಿ ನೀಡಲಾಗುವದೆಂದೂ ಭರವಸೆ ನೀಡಲಾಯಿತು.

ಜನತಾಪಕ್ಷ ಅಧಿಕಾರಕ್ಕೆ ಬಂದ ನಂತರ ಈ ಪ್ರಶ್ನೆ ಮತ್ತೆ ತೀಕ್ಷ್ಣವಾಗಿ ಬೆಳಕಿಗೆ ಬಂದಿದೆ. ಹಿಂದಿ ಮಾತಾಡುವ ಪ್ರದೇಶಗಳಲ್ಲಿ ಹೆಚ್ಚು ಚುನಾವಣಾ ಜಯಭೇರಿ ಹೊಡೆದ ಜನತಾ ಪಕ್ಷ ಎಲ್ಲಾ ಆಡಳಿತ ಉದ್ದೇಶಗಳಿಗೂ ಇಂಗ್ಲೀಷಿನಿಂದ ಹಿಂದಿಗೆ ಶೀಘ್ರ ವರ್ಗಾವಣೆ ತರುವುದು ತಮ್ಮ ಕರ್ತವ್ಯವೆಂದು ಅದರ ಮಂತ್ರಿಗಳು ಪರಿಗಣಿಸಿದ್ದರು. ಮತ್ತೊಮ್ಮೆ ಹಿಂದಿ-ಇಂಗ್ಲೀಷ್ ಬೆಂಬಲಿಗರ ನಡುವೆ ಬಿಸಿ ಬಿಸಿ ವಾಗ್ಯುದ್ಧಗಳು ನಡೆದವು. ೧೯೬೫ ರಲ್ಲಿ ಮೊದಲ ಪ್ರಧಾನಿಯು ನಿರ್ವಹಿಸಿದ ಪಾತ್ರದಂತೆಯೇ ಮುರಾರ್ಜಿ ದೇಸಾಯಿಯವರು

ಸಹ, ಹಿಂದಿಯನ್ನು ಎಂದೆಂದಿಗೂ ಒತ್ತಾಯವಾಗಿ ಹೇರುವುದಿಲ್ಲವೆಂತಲೂ, ಅಂತಹ ವರ್ಗಾವಣೆಗೆ ಹಿಂದಿಯೇತರ ಜನತೆಯು ಸಮ್ಮತಿ ನೀಡುವವರೆಗೂ ಸದ್ಯದ ಪರಿಸ್ಥಿತಿಯೇ ಮುಂದುವರಿಯುವುದೆಂದೂ ಭರವಸೆ ನೀಡಿ ಹಿಂದಿಯೇತರ ಜನತೆಯನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದರು.

## ಎಲ್ಲಾ ಭಾಷೆಗಳ ಸಮಾನತೆಯ ಅವಶ್ಯಕತೆ

ಇದು ಭಾಷಾ ಸಮಸ್ಯೆಗೆ ನಿಜವಾದ ಪರಿಹಾರವೇನೂ ನೀಡುವುದಿಲ್ಲ. ಹಿಂದಿ ಮತ್ತು ಇಂಗ್ಲೀಷ್‌ಗಳೆರಡರಲ್ಲಿ ಯಾವುದು ದೇಶದ ಸಾರ್ವತ್ರಿಕ ಭಾಷೆಯಾಗಬೇಕೆಂಬುದು ಪ್ರಶ್ನೆಯಲ್ಲ. ಭಾರತದ ಎಲ್ಲಾ ಭಾಷೆಗಳನ್ನೂ ಕೇಂದ್ರದಲ್ಲಿ ಎಲ್ಲಾ ಆಡಳಿತ ಮತ್ತು ಶೈಕ್ಷಣಿಕ ಉದ್ದೇಶಗಳಿಗೆ ಬಳಸುವುದರಿಂದ ಅದೇ ಸಮಯದಲ್ಲಿ ಎಲ್ಲಾ ವ್ಯವಹಾರಗಳನ್ನು ಎಲ್ಲ ಜನತೆಯ ಭಾಷೆಗೆ ಶೀಘ್ರ ವರ್ಗಾವಣೆ ಮಾಡುವುದರಿಂದ, ಎಲ್ಲಾ ಭಾಷೆಗಳ ಸಮಾನತೆಯನ್ನು ಆಚರಣೆಯಲ್ಲಿ ತರುವ ಪ್ರಶ್ನೆಯಾಗಿದೆ.

ಸಿ.ಪಿ.ಐ. (ಎಂ) ತನ್ನ ಕಾರ್ಯಕ್ರಮದಲ್ಲಿ ಭಾರತದ ಎಲ್ಲಾ ಭಾಷೆಗಳ ಸಮಾನತೆಯನ್ನು ಹೇಗೆ ಆಚರಣೆಯಲ್ಲಿ ತರಬೇಕೆಂದು ಬರೆದಿದೆ.

"(೬) ಪಾರ್ಲಿಮೆಂಟ್ ಮತ್ತು ಕೇಂದ್ರದ ಆಡಳಿತದಲ್ಲಿ ಎಲ್ಲಾ ರಾಷ್ಟ್ರೀಯ ಭಾಷೆಗಳ ಸಮಾನತೆಯನ್ನು ಮಾನ್ಯ ಮಾಡಲಾಗುವುದು. ಪಾರ್ಲಿಮೆಂಟಿನ ಸದಸ್ಯರು ಯಾವುದೇ ರಾಷ್ಟ್ರೀಯ ಭಾಷೆಯಲ್ಲಿ ಮಾತನಾಡಲು ಹಕ್ಕಿರುತ್ತದೆ. ಅದೇ ವೇಳೆಗೆ, ಅವರ ಭಾಷಣವನ್ನು ಇತರ ಎಲ್ಲಾ ಭಾಷೆಗಳಿಗೆ ಭಾಷಾಂತರಿಸಲಾಗುವುದು. ಎಲ್ಲಾ ಕಾಯ್ದೆಗಳನ್ನೂ, ಸರಕಾರಿ ಆಜ್ಞೆಗಳನ್ನೂ, ನಿರ್ಣಯಗಳನ್ನೂ ಎಲ್ಲಾ ರಾಷ್ಟ್ರೀಯ ಭಾಷೆಗಳಲ್ಲಿ ಒದಗಿಸಲಾಗುವುದು. ಹಿಂದಿಯನ್ನು ಆಡಳಿತ ಭಾಷೆಯಾಗಿ ಕಡ್ಡಾಯ ಮಾಡಲಾಗುವದಿಲ್ಲ. ಭಾರತದ ವಿವಿಧ ರಾಜ್ಯಗಳ ಜನತೆಯು ತಮ್ಮ ಆರ್ಥಿಕ, ಸಾಮಾಜಿಕ, ಬೌದ್ಧಿಕ ಬೆಳೆಯುವಿಕೆಯಲ್ಲಿ ತಮ್ಮ ಅಗತ್ಯತೆಗೆ ಸೂಕ್ತವಾದ ಸಂಪರ್ಕ ಭಾಷೆಯನ್ನು ಬೆಳೆಸಿಕೊಳ್ಳುತ್ತಾರೆ. ಆಡಳಿತ, ಶಾಸಕಾಂಗ, ನ್ಯಾಯಾಂಗಗಳಲ್ಲಿಯೂ ಹಾಗೂ

ಶಿಕ್ಷಣ ಮಾಧ್ಯಮವಾಗಿಯೂ ಇಂಗ್ಲೀಷನ್ನು ತ್ಯಜಿಸಿ, ಆಯಾ ರಾಷ್ಟ್ರೀಯ ಭಾಷೆಗಳನ್ನು ಬಳಸಲಾಗುವುದು. ಶಿಕ್ಷಣ ಸಂಸ್ಥೆಗಳಲ್ಲಿ ತಮ್ಮ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಪಡೆಯುವ ಹಕ್ಕನ್ನು ನೀಡಲಾಗುವುದು. ಪ್ರತಿಯೊಂದು ರಾಜ್ಯದ ರಾಷ್ಟ್ರಭಾಷೆಯನ್ನು ರಾಜ್ಯದ ಎಲ್ಲಾ ಸಾರ್ವಜನಿಕ ಹಾಗೂ ಸರ್ಕಾರಿ ಸಂಸ್ಥೆಗಳಲ್ಲಿ ಆಡಳಿತ ಭಾಷೆಯಾಗಿ ಉಪಯೋಗಿಸುವುದೂ, ಹಾಗೆಯೇ ರಾಜ್ಯದೊಳಗೆ ಅತ್ಯುನ್ನತ ದರ್ಜೆಯವರೆಗೂ ಈ ಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಉಪಯೋಗಿಸಲಾಗುವುದು. ಈ ರಾಜ್ಯ ಭಾಷೆಯ ಜೊತೆಯಲ್ಲಿ ಅವಶ್ಯವಿದ್ದಲ್ಲಿ ಅಲ್ಪಸಂಖ್ಯಾತರ ಭಾಷೆಯನ್ನಾಗಲಿ, ಪ್ರಾದೇಶಿಕ ಭಾಷೆಯನ್ನಾಗಲಿ ಉಪಯೋಗಿಸಲು ಅವಕಾಶವಿರುವುದು. ಉರ್ದು ಭಾಷೆ ಮತ್ತು ಲಿಪಿಯನ್ನು ರಕ್ಷಿಸಲಾಗುವುದು."

## ಅನೇಕ ಭಾಷೆಗಳ ಬಳಕೆ ಕಾರ್ಯಾಚರಣೆಯಲ್ಲಿ ಅಸಾಧ್ಯ ?

ಇದನ್ನು ವಿರೋಧಿಸುವವರು ಮಂಡಿಸುವ ಒಂದೇ ಒಂದು ವಾದವೆಂದರೆ, "ಅನೇಕ ಭಾಷೆಗಳನ್ನು ಬಳಸುವುದು ಕಾರ್ಯಾಚರಣೆಯಲ್ಲಿ ಸಾಧ್ಯವಿಲ್ಲದ್ದು" ಎಂದು. ಪಾರ್ಲಿಮೆಂಟಿನಲ್ಲಿಯೂ, ಕೇಂದ್ರ ಸರ್ಕಾರದ ಎಲ್ಲಾ ವ್ಯವಹಾರಗಳಲ್ಲಿಯೂ, ಎಲ್ಲಾ ಭಾಷೆಗಳನ್ನು ಬಳಸುವುದು ಹೇಗೆ ಸಾಧ್ಯ ? ಇದು ಅಧ್ವಾನಕ್ಕೆ ಎಡೆ ಮಾಡಿಕೊಡುವದಿಲ್ಲವೇ ?

"ಒಂದು ದೇಶ ಒಂದೇ ಭಾಷೆ" ಎನ್ನುವ ಸಂಪ್ರದಾಯದಲ್ಲಿ ಬೆಳೆದುಬಂದವರಿಗೆ ಈ ವಾದ ನಿಜವೆಂದು ಕಾಣಬಹುದು. ಆದರೆ ಇದು ಪೂರ್ತಿಯಾಗಿ ಅಸಂಭವ್ಯವಾದದ್ದು. ಏಕೆಂದರೆ ಅನೇಕ ದೇಶಗಳಲ್ಲಿ ಎರಡು ಅಥವಾ ಅದಕ್ಕಿಂತಲೂ ಹೆಚ್ಚು (ಕೆಲವು ದೇಶಗಳಲ್ಲಿ ೧೬ ಅಥವಾ ೧೭ ಭಾಷೆಗಳೂ ಸಹ) ಭಾಷೆಗಳನ್ನು ಮಾನ್ಯಮಾಡಿ ಆಡಳಿತ ಭಾಷೆಯಾಗಿ ಬಳಸಲಾಗುತ್ತಿದೆ.

ಉದಾಹರಣೆಯಾಗಿ ಕೆನಡಾ ಎರಡು ಭಾಷೆಗಳನ್ನು ಹೊಂದಿದೆ; ಇಂಗ್ಲೀಷ್ ಮತ್ತು ಫ್ರೆಂಚ್. ಬೆಲ್ಜಿಯಂ, ಸ್ವಿಟ್ಜರ್‌ಲ್ಯಾಂಡ್ ಮುಂತಾದ ಪಶ್ಚಿಮ ಯೂರೋಪ್ ರಾಷ್ಟ್ರಗಳು ಮೂರು ಅಥವಾ ನಾಲ್ಕು ಆಡಳಿತ ಭಾಷೆಗಳನ್ನು ಹೊಂದಿವೆ.

ಸೋವಿಯತ್ ಯೂನಿಯನ್‌ನಲ್ಲಿ ೧೫ ಅಥವಾ ೧೬ ಜನತೆಯ ಭಾಷೆಗಳನ್ನು ಮಾನ್ಯಮಾಡಿ ಆಡಳಿತ, ಶೈಕ್ಷಣಿಕ, ಉದ್ದೇಶಗಳಿಗೆ ಬಳಸಲಾಗುತ್ತಿದೆ. ಮಾಸ್ಕೊ ಮತ್ತು ಪೀಕಿಂಗ್‌ಗಳಲ್ಲಿರುವ ಸಮ್ಮೇಳನ ಭವನಗಳು ಭಾಷಣಗಳನ್ನು ಒಂದು ಭಾಷೆಯಿಂದ ಎಲ್ಲಾ ಭಾಷೆಗಳಿಗೆ ತಕ್ಷಣ ಭಾಷಾಂತರಿಸುವ ಸೌಕರ್ಯಗಳನ್ನು ಹೊಂದಿವೆ. ಚೈನಾ ಮತ್ತು ಇತರೆ ಸಮಾಜವಾದಿ ದೇಶಗಳಲ್ಲೂ ಸಹ ಇದೇ ರೀತಿ ಹೇಗೆ ಈ ವ್ಯವಸ್ಥೆಯನ್ನು ಸೋವಿಯತ್ ಕಮ್ಯುನಿಸ್ಟ ಪಕ್ಷ ಮತ್ತು ಚೈನಾ ಕಮ್ಯುನಿಸ್ಟ ಪಕ್ಷದ ಸಮ್ಮೇಳನಗಳಲ್ಲಿಯೂ ಹಾಗೂ ೧೯೬೦ರಲ್ಲಿ ಮಾಸ್ಕೊದಲ್ಲಿ ನಡೆದ ಕಮ್ಯುನಿಸ್ಟ ಪಕ್ಷಗಳ ವಿಶ್ವ ಸಮ್ಮೇಳನದಲ್ಲಿಯೂ ಬಳಸಿಕೊಳ್ಳಲಾಯಿತೆಂದು ನನಗೆ ವೈಯುಕ್ತಿಕ ಅನುಭವಗಳಿವೆ.

## ವಿಶ್ವರಾಷ್ಟ್ರ ಸಂಸ್ಥೆಯಲ್ಲಿ ಹಿಂದಿ

ಯು. ಎನ್. ಓ. ದಂತಹ ವಿಶ್ವಸಂಸ್ಥೆಯಲ್ಲಿ ವ್ಯವಹಾರಗಳನ್ನು ನಡೆಸುವ ವಿಧಾನಗಳನ್ನೇ ತೆಗೆದುಕೊಳ್ಳೋಣ. ಇಲ್ಲಿಯೂ ಸಹ ಅನೇಕ ಭಾಷೆಗಳನ್ನು ಬಳಸಲಾಗುತ್ತಿದ್ದು, ಒಂದು ಭಾಷೆಯಲ್ಲಿ ಮಾಡಿದ ಭಾಷಣವನ್ನು ಆಗಿಂದಾಗಲೇ ಇತರೆ ಭಾಷೆಗಳಿಗೆ ಭಾಷಾಂತರಿಸುವ ಯಾಂತ್ರಿಕ ವ್ಯವಸ್ಥೆ ಏರ್ಪಡಿಸಲಾಗಿದೆ. ಈ ಪಟ್ಟಿಯಲ್ಲಿ ಹಿಂದಿ ಇಲ್ಲಿಯವರೆಗೂ ಒಳಗೊಂಡಿರಲಿಲ್ಲ. ಆದರೆ ವಿದೇಶ ವ್ಯವಹಾರ ಮಂತ್ರಿ ಶ್ರೀ ವಾಜಪೇಯಿಯವರು ಹಿಂದಿಯೂ ಒಳಗೊಳ್ಳುವಂತೆ ಮಾಡಲು ಶ್ರಮವಹಿಸಿದ್ದಾರೆ. ಈ ಯಾಂತ್ರಿಕ ವ್ಯವಸ್ಥೆಯ ಖರ್ಚುಗಳನ್ನು ವಹಿಸಿಕೊಳ್ಳಲು ಭಾರತ ಸರ್ಕಾರವು ಸಿದ್ಧವಾಗಿವೆ ಎಂದೂ ಸಹ ಹೇಳಲಾಗಿದೆ.

ಯಾರಾದರೂ ಕೇಳಬಹುದು : ಯು. ಎನ್. ಓ. ದಲ್ಲಿ ಹಿಂದಿಯ ಭಾಷಣಗಳನ್ನು ಇತರೆ ವಿಶ್ವ ಭಾಷೆಗಳಿಗೆ ಭಾಷಾಂತರಿಸುವ ಯಾಂತ್ರಿಕ ವ್ಯವಸ್ಥೆಯ ಸ್ಥಾಪಿನೆಯ ಖರ್ಚನ್ನು ವಹಿಸಿಕೊಳ್ಳಲು ತಯಾರಾದ ಸರ್ಕಾರಕ್ಕೆ, ತನ್ನ ಪಾರ್ಲಿಮೆಂಟಿನಲ್ಲಿಯೇ ಒಂದು ಭಾಷೆಯಲ್ಲಿಮಾಡಿದ ಭಾಷಣವನ್ನು ಇತರೆ ಭಾಷೆಗಳಿಗೆ ಭಾಷಾಂತರಿಸುವ ವ್ಯವಸ್ಥೆಯನ್ನು ಏರ್ಪಡಿಸಲುಸಾಧ್ಯವಿಲ್ಲವೇ? ಎಂದು.

ಒಳಬರುವ ಮತ್ತು ಹೊರಹೋಗುವ ಸಂದೇಶಗಳನ್ನು ಒಂದು ಭಾಷೆಯಿಂದ ಇತರೆ ಎಲ್ಲಾ ಭಾಷೆಗಳಿಗೆ ಭಾಷಾಂತರಿಸುವ ವಿಭಾಗವೊಂದನ್ನು ಸ್ಥಾಪಿಸಲು. ಕೇಂದ್ರಸೆಕ್ರೆಟೇರಿಯೇಟ್ ಮತ್ತು ಆಡಳಿತ ವಿಭಾಗಗಳಿಗೇನೂ ಕಷ್ಟ ಕರವಾದುದಲ್ಲ. ಈ ದಾರಿಗೆ ಅಡ್ಡಿಯಾಗಿ ಬರುವುದೇನೆಂದರೆ, ನಮ್ಮ ಸರ್ಕಾರದ ಮುಖಂಡರುಗಳು ಪಡೆದುಕೊಂಡು ಬಂದಿರುವ "ಒಂದು ದೇಶ ಒಂದೇ ಭಾಷೆ" ಎನ್ನುವ ಸಂಪ್ರದಾಯ ಮಾತ್ರ.

## ಯಾವುದೇ ಭಾಷೆಯ ಒತ್ತಾಯ ಹೇರಿಕೆ ವಿಚ್ಛಿದ್ರಕಾರಿ

ಭಾರತ ಒಂದೇ ದೇಶವಾಗಿದ್ದರೂ ಸಹ ಅದು ವಿವಿಧ ಭಾಷಾವಾರು, ಸಾಂಸ್ಕೃತಿಕ ಸಮುದಾಯಗಳಿಂದ ಕೂಡಿದೆ. ಆಡಳಿತ ಭಾಷೆಯ ಹೆಸರಲ್ಲಾಗಲಿ, ರಾಷ್ಟ್ರ ಭಾಷೆಯ ಹೆಸರಲ್ಲಾಗಲಿ, ಅಥವಾ ಸಂಪರ್ಕ ಭಾಷೆಯ ಹೆಸರಲ್ಲಾಗಲಿ, ಯಾವುದೇ ಒಂದು ಭಾಷೆಯನ್ನು ಇತರೆ ಭಾಷ್ಯಿಕ, ಸಾಂಸ್ಕೃತಿಕ ಸಮುದಾಯಗಳ ಮೇಲೆ ಹೇರಲ್ಪಟ್ಟರೆ, ದೇಶದ ಐಕ್ಯತೆಯನ್ನು ಒಡೆಯುವ, ಛಿದ್ರಿಸುವ ದಾರಿಯಾಗುವುದು ಖಚಿತ.

ಭಾರತದೊಂದಿಗೇ ಅಸ್ತಿತ್ವಕ್ಕೆ ಬಂದ ಪಾಕಿಸ್ತಾನದಲ್ಲಿ ಏನಾಯಿತೆಂದು ನೋಡೋಣ. ಭಾರತದಲ್ಲಿಯಂತೆಯೇ ಪಾಕಿಸ್ತಾನದಲ್ಲಿಯೂ ಸಹ ರಾಷ್ಟ್ರದ ನಾಯಕರುಗಳು "ಒಂದೇ ದೇಶ ಒಂದೇ ಭಾಷೆ" ಎನ್ನುವ ಸಂಪ್ರದಾಯಕ್ಕೆ ಗಂಟು ಬಿದ್ದವರು. ಈ ಕಲ್ಪನೆಯನ್ನು ಒತ್ತಾಯವಾಗಿ ಹೇರುವ ಪ್ರಯತ್ನಗಳು, ಪೂರ್ವಪಾಕಿಸ್ತಾನದಲ್ಲಿ ಬೃಹತ್ ವಿರೋಧಕ್ಕೊಳಗಾಗಿ ಪಾಕಿಸ್ತಾನವನ್ನು ಒಡೆದುಕೊಂಡುಇಂದಿನ ಬಾಂಗ್ಲಾದೇಶವಾಗುವುದರಲ್ಲಿ ಕೊನೆಗೊಂಡಿತು. ಉಳಿದ ಪಾಕಿಸ್ತಾನವೂ ಸಹ ಅನೇಕ ವರ್ಷಗಳಿಂದ ಬಲೂಚಿ, ಪಠಾಣ, ಪಂಜಾಬಿ, ಸಿಂಧಿ, ರಾಷ್ಟ್ರೀಯ ಭಾವನೆಗಳ ಮೇಲೆ ಬೃಹತ್ ಉತ್ಕ್ರಾಂತಿಗಳನ್ನು ಕಂಡಿತು.

ಇಂದು ಭಾರತದಲ್ಲಿನ ಭಾಷಾ ಹೋರಾಟಗಳೂ ಸಹ, ಪಾಕಿಸ್ತಾನದಲ್ಲಿನ ಈ ರಾಜಕೀಯ ಹೋರಾಟದ ಗುಣಗಳನ್ನು ಪಡೆದಿವೆ.

ನಮ್ಮದು "ವೈವಿಧ್ಯತಾ ಸಮಾಜ" (plural society) ವೆಂದೂ, ಈ ವಾಸ್ತವತೆಯನ್ನು ಪರಿಗಣಿಸುವುದರಿಂದ ಮಾತ್ರ ದೇಶದ ಐಕ್ಯತೆಯನ್ನು

ಸಂರಕ್ಷಿಸಬಹುದೆಂದೂ ರಾಷ್ಟ್ರಾಧ್ಯಕ್ಷ ಶ್ರೀ ಸಂಜೀವರೆಡ್ಡಿಯವರೇ ತಮ್ಮ ಇತ್ತೀಚಿನ ಹೇಳಿಕೆಗಳಲ್ಲಿ ವ್ಯಕ್ತಪಡಿಸಿದ್ದಾರೆ. ರಾಜ್ಯಗಳ ಸ್ವಾಯತ್ತತೆಯನ್ನು ಪ್ರತಿಪಾದಿಸುವ ನಮ್ಮಂತೆಯೇ, ರೆಡ್ಡಿಯವರೂ ಸಹ ಭಾರತದ ಐಕ್ಯತೆ ಮತ್ತು ರಾಜ್ಯಗಳ ಸ್ವಾಯತ್ತತೆಯು ಪರಸ್ಪರ ವಿರೋಧಗಳಾಗಿರದೆ, ಪರಸ್ಪರ ಪೂರಕಗಳಾಗಿವೆಯೆಂದೇ ಭಾವಿಸಿದ್ದಾರೆ. ಅವರೂ ಸಹ ಬಹಳ ಪ್ರಸಿದ್ಧವಾದ "ವೈವಿಧ್ಯತೆಯಲ್ಲಿಯೇ ಐಕ್ಯತೆ" ಎನ್ನುವ ಮಾತನ್ನು ಪುನಃ ಪುನಃ ಉಚ್ಚರಿಸಿದ್ದಾರೆ. ತಮ್ಮ ಭಾಷೆ ಮತ್ತು ಸಂಸ್ಕೃತಿಗೆ ತಮಗಿರುವಷ್ಟೇ ಅಭಿಮಾನ, ಹಿಂದಿಯೇತರ ರಾಜ್ಯಗಳ ಜನತೆಗೂ ಸಹ ಅವರ ಭಾಷೆ, ಸಂಸ್ಕೃತಿಗಳ ಮೇಲೆ ಅಭಿಮಾನ ವಿದೆಯೆಂದು ಹಿಂದೀ ಪ್ರದೇಶದ ಪ್ರಜಾಸತ್ತಾತ್ಮಕ ಚಳುವಳಿಯು ಅರಿತ-ಕೊಳ್ಳಬೇಕಾಗಿದೆ.

ಒಂದು ವೇಳೆ ಮೊದಲು ಭಾರತದ ಎಲ್ಲಾ ಭಾಷೆಗಳ ಪೂರ್ಣ ಸಮಾನತೆಯನ್ನು ಮಾನ್ಯಮಾಡಿದರೆ, ಬಹುಸಂಖ್ಯಾತ ಭಾಷಾವಾರು ಸಮುದಾಯದ ಭಾಷೆಯಾಗಿರುವುದರಿಂದಲೂ, ಇನ್ನೂ ಹೆಚ್ಚಿನ ಜನ ಅದನ್ನು ಅರ್ಥ ಮಾಡಿಕೊಳ್ಳುವವರಿರುವುದರಿಂದಲೂ ಹಿಂದಿಯು ಭಾರತದ ಸಂಪರ್ಕ ಭಾಷೆಯಾಗುವ ಎಲ್ಲಾ ಸಾಮರ್ಥ್ಯಗಳನ್ನು ಹೊಂದಿದೆ. ಹಿಂದಿಯನ್ನು ಸಂಪರ್ಕ ಭಾಷೆಯಾಗಿಸುವುದೂ ಸಹ, ವಿವಿಧ ಭಾಷಾವಾರು, ಸಾಂಸ್ಕೃತಿಕ ಸಮುದಾಯಗಳ ಸ್ವಯಂಸಂಪರ್ಕ ಪ್ರಕ್ರಿಯೆಗೆ ಬಿಡಬೇಕು. ಬದಲು ಬ್ರಿಟಿಷ್‌ರು ಇಂಗ್ಲೀಷ್‌ನ್ನು ಎಲ್ಲಾ ಭಾಷಾವಾರು ಸಮುದಾಯಗಳ ಮೇಲೆ ಹೇರಿದಂತೆ (ಹಿಂದಿ ಮಾತಾಡುವ ಜನರನ್ನೂ ಒಳಗೊಂಡು) ಹಿಂದಿಯೇತರ ಜನತೆಯ ಮೇಲೆ ಹಿಂದಿಯನ್ನು ಒತ್ತಾಯವಾಗಿ ಹೇರುವ ಪ್ರಯತ್ನಗಳನ್ನು ಮಾಡಿದರೆ. ವಿರೋಧ ನಿಸ್ಸಂಶಯವಾಗಿ ಬೆಳೆದು, ಹಿಂದೆ ಎಷ್ಟೋ ಸಂದರ್ಭಗಳಲ್ಲಿ, ಎಷ್ಟೋ ಕಡೆಗಳಲ್ಲಿ ನಡೆದಂತೆ ಉತ್ಕ್ರಾಂತಿಗಳಿಗೆ ಎಡೆಮಾಡಿಕೊಡುತ್ತದೆ.

## ಎಲ್ಲಾ ರಂಗಗಳಲ್ಲಿಯೂ ಸಮಗ್ರತೆ

ಈ ಅಂಶ ರಾಜಕೀಯ ಆರ್ಥಿಕ ಸಮಗ್ರತೆಗೂ ಅಥವಾ ಕೇಂದ್ರ-ರಾಜ್ಯ ಸರ್ಕಾರಗಳ ಆಡಳಿತ ಕಾರ್ಯದ ಸಮನ್ವಯತೆಗೂ ಅನ್ವಯಿಸುತ್ತದೆ.

ಹಿಂದುಳಿದ ದೇಶವಾಗಿದ್ದು, ಸಾಧ್ಯವಾದಷ್ಟು ಶೀಘ್ರವಾಗಿ ಅಭಿವೃದ್ಧಿ ಹೊಂದಲು, ತನ್ನ ಭೌತಿಕ, ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ಆಕಾಂಕ್ಷೆಯಿಂದ, ಕೇಂದ್ರವು ಎಲ್ಲಾ ರಾಜ್ಯಗಳ ಕಾರ್ಯವನ್ನು ಸಮನ್ವಯ ಪಡಿಸುವುದರಲ್ಲಿ ಆಸಕ್ತಿ ಹೊಂದಿರಬೇಕು. ಪ್ರತಿಯೊಂದು ರಾಜ್ಯವೂ ಅತ್ಯುನ್ನತ ಸ್ವಾಯತ್ತತೆಯನ್ನು ಹೊಂದಿದರೂ ಸಹ, ಅದರ ಅಭಿವೃದ್ಧಿಗಾಗಿ, ಕೇಂದ್ರದ ಹಾಗೂ ರಾಜ್ಯಗಳ ಸಹಾಯ ಸಹಕಾರಗಳು ಬೇಕಾಗುತ್ತವೆ.

ಆದ್ದರಿಂದ ಸಿ. ಪಿ. ಎಂ. ನ ನಾವು ಮತ್ತು ಇತರ ಎಡ, ಪ್ರಜಾ ಸತ್ತಾತ್ಮಕ ಪಕ್ಷಗಳು ಯಾವುದೇ ವೇಳೆಯಲ್ಲಿಯೂ, ದೇಶದ ಯಾವುದೇ ಭಾಗ ದಲ್ಲಿಯೂ ದೇಶದಿಂದ ಪ್ರತ್ಯೇಕವಾಗುವ ಚಳುವಳಿಯನ್ನು ಸಮ್ಮತಿಸುವುದಿಲ್ಲ.

ರಾಜ್ಯಗಳಿಗೆ ಸಂವಿಧಾನಾತ್ಮಕವಾಗಿ ಕೊಡಲ್ಪಟ್ಟ ವಿಷಯಗಳ ಆಡಳಿತದ ಬಗೆಗೂ ಸಹ ಸ್ವಯಂ ಇಚ್ಛೆಯ ಆಧಾರದ ಮೇಲೆ ಕೇಂದ್ರ–ರಾಜ್ಯಗಳ ನಡುವೆ ಹಾಗೂ ವಿವಿಧ ರಾಜ್ಯಗಳ ನಡುವೆ ಸಮನ್ವಯತೆ ಇರಬೇಕೆಂದೂ ಸಹ ಅಪೇಕ್ಷಿಸುತ್ತೇವೆ.

ರಾಷ್ಟ್ರೀಯ ಅಭಿವೃದ್ಧಿ ಮಂಡಳಿ, ಕೇಂದ್ರ ಶಿಕ್ಷಣ ಮಂಡಳಿ, ವಲಯ ಪರಿಷತ್ತುಗಳು (Zonal Councils) ಮುಂತಾದವುಗಳು ಇಂದಿಗಿಂತಲೂ ಹೆಚ್ಚು ವ್ಯವಸ್ಥಿತ ರೀತಿಯಲ್ಲಿ ಕಾರ್ಯೋನ್ಮುಖವಾಗಿ ಮುಂದುವರಿಯಬೇಕು. ಇಂತಹ ಇನ್ನೂ ಅನೇಕ ಮಂಡಳಿಗಳು ರಚನೆಗೊಳ್ಳಬೇಕು. ಈ ಮಂಡಳಿಗಳ ಮುಖಾಂತರ ಸಮನ್ವಯತೆಯ ಕಾರ್ಯ ಕೇಂದ್ರದ ಸರ್ವಾಧಿಕಾರದಿಂದಲ್ಲ, ಬದಲು ಪರಸ್ಪರ ಸಹಾಯ ಸಹಕಾರ ಭಾವನೆಗಳ ಮೇಲೆ ಜರುಗಬೇಕು. "ಬಲಿಷ್ಠ ಕೇಂದ್ರ" ದ ಸಿದ್ಧಾಂತವನ್ನು ಪ್ರತಿಪಾದಿಸುವವರು, ರಾಜ್ಯಗಳೂ ಸಹ ಕೇಂದ್ರದಷ್ಟೇ ಭಾರತದ ಐಕ್ಯತೆಯನ್ನು ಕಾಪಾಡುವುದರಲ್ಲಿ ಆಸಕ್ತಿ ಹೊಂದಿವೆ, ಎಂಬ ವಾಸ್ತವತೆಯನ್ನು ಒಪ್ಪಿಕೊಳ್ಳುತ್ತಾರೋ ಎನ್ನುವುದೇ ಮುಖ್ಯ ಪ್ರಶ್ನೆ ಯಾಗಿದೆ.

## ಬಹುರಾಷ್ಟ್ರೀಯ ದೇಶ

ಈ ಸಂದರ್ಭದಲ್ಲಿ "ಬಹುರಾಷ್ಟ್ರೀಯ" ದೇಶ ಎಂಬ ಪದವನ್ನು ನಾವು ಭಾರತಕ್ಕೆ ಅನ್ವಯಿಸಿದುದರ ಬಗ್ಗೆ ಕೆಲವರು ವಿರೋಧ ವ್ಯಕ್ತಪಡಿಸಿದ್ದಾರೆ.

ಇಲ್ಲಿ ಸ್ಪಷ್ಟೀಕರಣ ನೀಡಬೇಕಾಗಿದೆ. ನಾವು "ಬಹು ರಾಷ್ಟ್ರೀಯ" ದೇಶ ಎಂಬ ಪದವನ್ನು ಬಳಸಿರುವುದು ಪ್ರತಿ ರಾಷ್ಟ್ರೀಯ ಜನಾಂಗಕ್ಕೂ ತನ್ನದೇ ಆದ ಸ್ವಂತ ಪ್ರತ್ಯೇಕ ಪ್ರಭುತ್ವವನ್ನು ನಿರ್ಮಿಸಿಕೊಳ್ಳಲು ಹಕ್ಕಿದೆ ಎನ್ನುವ ಅರ್ಥದಲ್ಲಿ, ಎಂದು ಅವರು ತಿಳಿದಿರಲಿ.

ಮೇಲೆ ಹೇಳಿದ ಕೆನಡಾ, ಒಂದೆರಡು ಪಶ್ಚಿಮ ಯೂರೋಪ್ ರಾಷ್ಟ್ರಗಳ, ಅನೇಕ ಸಮಾಜವಾದಿ ರಾಷ್ಟ್ರಗಳ, ಉದಾಹರಣೆಗಳೇ ಸ್ಪಷ್ಟಗೊಳಿಸುತ್ತವೆ. ಒಂದು ದೇಶ ಬಹುರಾಷ್ಟ್ರೀಯ ಗುಣ ಹೊಂದಿದೆಯೆಂದರೆ, ಪ್ರತಿಯೊಂದು ರಾಷ್ಟ್ರೀಯ ಜನಾಂಗಕ್ಕೂ ತನ್ನದೇ ಪ್ರತ್ಯೇಕ ಪ್ರಭುತ್ವ ನಿರ್ಮಿಸಿಕೊಳ್ಳುವ ಹಕ್ಕಿದೆ ಎಂದು ಅರ್ಥವಲ್ಲ. ನಾವು ಈ ಪದವನ್ನು ರಾಷ್ಟ್ರಾಧ್ಯಕ್ಷ ಸಂಜೀವರೆಡ್ಡಿಯವರು ಉಪಯೋಗಿಸಿದ "ವೈವಿಧ್ಯತಾ ಸಮಾಜ" (plural society) ಎನ್ನುವ ಅರ್ಥದಲ್ಲಿ ಬಳಸಿದ್ದೇವೆ. ಅಧ್ಯಕ್ಷ ರೆಡ್ಡಿಯವರ ವಾದದಂತೆಯೇ, ನಮ್ಮ ವಾದವೂ ಸಹ, ನಮ್ಮಂತಹ ಒಂದು ದೇಶ. "ವೈವಿಧ್ಯತೆಯಲ್ಲಿಯೇ ಐಕ್ಯತೆ" ಎನ್ನುವ ವಾಸ್ತವತೆಯನ್ನು ಪರಿಗಣಿಸಿ ಪೂರಕ ಕ್ರಮಗಳನ್ನು ಕೈಗೊಳ್ಳುವುದರಿಂದ ಮಾತ್ರ ದೇಶದ ಐಕ್ಯತೆಯನ್ನು ಬಲಗೊಳಿಸಲೂ, ಸಂರಕ್ಷಿಸಲೂ ಸಾಧ್ಯ ಎಂದು. ಆದ್ದರಿಂದಲೇ, ಭಾರತದ ಐಕ್ಯತೆ ಮತ್ತು ರಾಜ್ಯಗಳ ಸ್ವಾಯತ್ತತೆ, ಒಂದಕ್ಕೊಂದು ವಿರೋಧವಾಗಿರದೆ, ಪರಸ್ಪರ ಪೂರಕವಾಗಿವೆಯೆಂದೇ ನಾವು ಹೇಳುವುದು.

---

# ಕೇಂದ್ರ-ರಾಜ್ಯಗಳ ಸಂಬಂಧ

—ಪಿ. ರಾಮಮೂರ್ತಿ

ಪ್ರಧಾನ ಮಂತ್ರಿಗಳು ಕೇಂದ್ರ-ರಾಜ್ಯ ಸಂಬಂಧದ ಬಗ್ಗೆ ರಾಷ್ಟ್ರ ಮಟ್ಟದ ಚರ್ಚೆಯನ್ನು ಬಯಸುತ್ತಿಲ್ಲ. ಪ್ರಧಾನ ಮಂತ್ರಿಗಳು ಬಯಸಲಿ, ಬಯಸದಿರಲಿ, ರಾಷ್ಟ್ರ ಮಟ್ಟದ ಚರ್ಚೆ ನಡೆಯುತ್ತಲೇ ಇದೆ. ರಾಷ್ಟ್ರಾಧ್ಯಕ್ಷರೂ ಸಹ ಈ ಚರ್ಚೆಯಲ್ಲಿ ಭಾಗಿಯಾಗಿದ್ದಾರೆಂಬುದು ನನಗೆ ಸಂತೋಷಕರವಾದ ಸಂಗತಿ. ಜನವರಿ ೨೫ರ 'ಲಿಂಕ್' ಪತ್ರಿಕೆಗೆ ಕೊಟ್ಟ ಸಂದರ್ಶನದಲ್ಲಿ, ತಾವು ಹಿಂದೆ ಮುಖ್ಯ ಮಂತ್ರಿಯಾಗಿದ್ದಾಗ ಹೇಗೆ ಸಣ್ಣ ವಿಷಯಗಳಿಗೂ ಸಹ ದೆಹಲಿಗೆ ಬಂದು ಅಧಿಕಾರಿಗಳೊಂದಿಗೋ, ಉಪಕಾರ್ಯದರ್ಶಿಗಳೊಂದಿಗೋ, ಚರ್ಚಿಸಿ ಕೆಲಸ ಮಾಡಿಸಿಕೊಳ್ಳಬೇಕಾಗಿತ್ತೆಂದು ತಮ್ಮ ಅನುಭವಗಳನ್ನೇ ವ್ಯಕ್ತಪಡಿಸಿದ್ದಾರೆ. ಇದು ಇಪ್ಪತ್ತು ವರ್ಷಗಳ ಹಿಂದೆ ರಾಷ್ಟ್ರಪತಿಯವರ ಅನುಭವವಾಗಿದ್ದರೆ, ಇಂದಿನ ಪರಿಸ್ಥಿತಿ ಏನಾಗಿರಬಹುದೆಂದು ಯಾರಾದರೂ ಕಲ್ಪಿಸಿಕೊಳ್ಳಬಹುದು.

ನಾನು ವಿವಿಧ ರಾಜ್ಯ ಸರ್ಕಾರಗಳ ಮತ್ತು ಕೇಂದ್ರ ಸರ್ಕಾರಗಳ ಕಾರ್ಯಾಚರಣೆಯ ಬಗ್ಗೆ ವಿವರವಾಗಿ ಮಾತನಾಡಲು ಬಯಸುವುದಿಲ್ಲ. ಈ ಸಂವಿಧಾನದ ಬಗೆಗೆ ಹೇಳುವುದಾದರೆ, ಇನ್ನೂ ಸಡಿಲವಾದ (flexible) ರೀತಿಯಲ್ಲಿ ಕಾರ್ಯಾಚರಿಸುವುದರಿಂದ ಸಮಸ್ಯೆಯನ್ನು ಬಗೆಹರಿಸುವ ಪ್ರಶ್ನೆಯೇ ಇಲ್ಲವೆಂದು ತೋರಿಸಲು ಬಯಸುತ್ತೇನೆ. ರಾಜ್ಯಗಳು ಕೇಂದ್ರ ಸರಕಾರದ ಯಾವುದೇ ಅಡ್ಡಿ ಆತಂಕಗಳಿಲ್ಲದೆಯೇ ಕಾರ್ಯನಿರ್ವಹಿಸಲು ಸಂವಿಧಾನಾತ್ಮಕ ರಕ್ಷಣೆಗಳನ್ನು ಒದಗಿಸಬೇಕಾಗಿದೆ.

ಪ್ರತಿ ಭಾಗಗಳನ್ನೂ, ಪ್ರತಿ ಅನುಚ್ಛೇದವನ್ನೂ ಹೋಲಿಸಿ ನೋಡಿದರೂ ನಮ್ಮ ಸಂವಿಧಾನ ೧೯೩೫ರ ಕಾಯ್ದೆಯ ಪ್ರತಿರೂಪದಂತಿದೆ. ೧೯೩೫ರ ಕಾಯ್ದೆಯು ಆಗ ರಾಷ್ಟ್ರೀಯ ಚಳುವಳಿಯಿಂದ ಪೂರ್ಣವಾಗಿ ತಿರಸ್ಕರಿಸಲ್ಪಟ್ಟಿತ್ತು.

ಉದಾಹರಣೆಯಾಗಿ, ೧೯೩೫ ರಲ್ಲಿ ಕೇಂದ್ರ ಶಾಸನ ಮಂಡಳ (Central Legislative Council) ಕಾಂಗ್ರೆಸ್ ಪಕ್ಷ,ಮತ್ತು ಮುಸ್ಲಿಂ

ಲೀಗ್‌ನೊಂದಿಗೆ ಕೂಡಿ ಒಂದು ನಿರ್ಣಯವನ್ನು ಅಂಗೀಕರಿಸಿತ್ತು. ಆ ನಿರ್ಣಯದಲ್ಲಿ ಹೀಗೆ ಹೇಳಲಾಗಿದೆ:

"ಸಂಸ್ಥಾನ (Provinces) ಸ್ವಾಯತ್ತತೆಯ ಯೋಜನೆಯು ಅತೃಪ್ತಿಕರ ಹಾಗೂ ನಿರಾಶಾದಾಯಕವಾಗಿದೆಯೆಂದು ಈ ಸಭೆಯು ಅಭಿಪ್ರಾಯ ಪಡುತ್ತದೆ. ಏಕೆಂದರೆ, ಅದರಲ್ಲಿ ಮುಖ್ಯವಾಗಿ ಸೆಕೆಂಡ್ ಚೇಂಬರಿನ (Second Chamber) ಸ್ಥಾಪನೆ ಹಾಗೂ ಕಾರ್ಯಾಂಗ, ಶಾಸಕಾಂಗಗಳ ಅಧಿಕಾರವನ್ನು ನಿರುಪ್ರಯೋಜಕವಾಗಿ ಮಾಡುವ ರಾಜ್ಯಪಾಲರ ಅಸಾಮಾನ್ಯವಾದ ವಿಶೇಷ ಅಧಿಕಾರಗಳು, ಮುಂತಾದ ಅನೇಕ ಆಕ್ಷೇಪಾರ್ಹ ಅಂಶಗಳಿಂದ ಕೂಡಿದೆ."

೧೯೩೫ ರ ಕಾಯ್ದೆಯ ಬಗೆಗೆ ಪಂಡಿತ್ ಜವಾಹರಲಾಲ್, ಡಾ| ರಾಜೇಂದ್ರ ಪ್ರಸಾದ್, ಸರದಾರ್ ವಲ್ಲಭಭಾಯಿ ಪಟೇಲ್, ಆಚಾರ್ಯ ಕೃಪಲಾನಿ, ಮೌಲಾನಾ ಆಜಾದ್ ಅವರು ಕಾಂಗ್ರೆಸ್ ಸಮ್ಮೇಳನದಲ್ಲಿ ಮಾಡಿದ ಭಾಷಣಗಳಿಂದ ಉಲ್ಲೇಖಿಸಿ ಹೇಳಬಲ್ಲೆ. ಆಕಾಲಕ್ಕೆ ನಾನು ಕಾಂಗ್ರೆಸ್ ಭಾಗವಾಗಿಯೇ ಇದ್ದು, ೧೯೩೫ರ ಕಾಯ್ದೆಯನ್ನು ಹೇರುವುದರ ವಿರುದ್ಧ ಹೋರಾಡುತ್ತಿದ್ದೆ.

೧೯೩೫ರ ಕಾಯ್ದೆಯ ಸಂಸ್ಥಾನ ಸ್ವಾಯತ್ತತೆಯನ್ನು ನಾವು ತಿರಸ್ಕರಿಸಿದ ಮುಖ್ಯ ಕಾರಣ, ಆ ಕಾಯ್ದೆಯಲ್ಲಿ ತೋರಿಸಿದಂತೆ, ಸಂಸ್ಥಾನ ಸ್ವಾಯತ್ತತೆಯೇ ಸುಳ್ಳಾಗಿದ್ದುದು. ಏಕೆಂದರೆ. ಸಂಸ್ಥಾನಗಳ ಜವಾಬ್ದಾರಿ ಬಹಳವಿದ್ದು, ಎಲ್ಲಾ ರಾಷ್ಟ್ರನಿರ್ಮಾಣ ಕಾರ್ಯಚಟುವಟಿಕೆಗಳೂ ಸಂಸ್ಥಾನ ಸರ್ಕಾರಗಳ ಅಧಿಕಾರದಲ್ಲಿದ್ದವು. ಆದರೆ ಈ ಜವಾಬ್ದಾರಿ ಕಾರ್ಯಗಳನ್ನು ನಿರ್ವಹಿಸಲು ಹಣಕಾಸಿನ ಸಂಪನ್ಮೂಲಗಳಿರಲಿಲ್ಲ. ಅಲ್ಲದೆ ಅದರಲ್ಲಿದ್ದ ಹಾಗೆ, ಸಂಯುಕ್ತ ಸ್ವರೂಪ (federal) ವ್ಯವಸ್ಥೆಯ ಸಂಸ್ಥಾನದ ಅಧಿಕಾರದಲ್ಲಿ ಹಸ್ತಕ್ಷೇಪ ಮಾಡಲು ವೈಸ್‌ರಾಯ್‌ರವರಿಗಿದ್ದ ಅಧಿಕಾರ, ಸಂಸ್ಥಾನ ಸ್ವಾಯತ್ತತೆಯನ್ನೇ ಅರ್ಥರಹಿತವನ್ನಾಗಿ ಮಾಡಿತ್ತು. ಈ ಕಾರಣದಿಂದಲೇ ನಾವು ೧೯೩೫ರ ಕಾಯ್ದೆಯನ್ನು ತಿರಸ್ಕರಿಸಿದ್ದೆವು.

## ಇಂದಿನ ಪರಿಸ್ಥಿತಿ

ಇಂದು ಈಗಿನ ಸಂವಿಧಾನದಲ್ಲಿ ರಾಜ್ಯದ ಪರಿಸ್ಥಿತಿ ಏನಾಗಿದೆ? ೧೯೨೭ ರಲ್ಲಿ ಕಾಂಗ್ರೆಸ್ ಪಕ್ಷವು ಭಾರತಕ್ಕೆ ಸಂವಿಧಾನವೊಂದನ್ನು ರೂಪಿಸಲು ಮೋತಿಲಾಲ್ ನೆಹರೂ ಸಮಿತಿಯನ್ನು ನೇಮಿಸಿತ್ತು. ಇದಕ್ಕೆ ದಿ. ಜವಾಹರ್ ಲಾಲ್ ನೆಹರೂರವರು ಕಾರ್ಯದರ್ಶಿಯಾಗಿದ್ದರು. ಈ ಸಮಿತಿಯು ಶಿಫಾರಸು ಮಾಡಿದ ಸಂವಿಧಾನದಲ್ಲಿ ಈ ದೇಶದ ಭಾಷಾವಾರು ಸಮುದಾಯಗಳು ಪ್ರತ್ಯೇಕ ಸಮುದಾಯಗಳೆಂದು ಪರಿಗಣಿಸಲಾಗಿತ್ತು. ನಾನಿಲ್ಲಿ 'ರಾಷ್ಟ್ರೀಯತೆ' ಎನ್ನುವ ಶಬ್ದವನ್ನು ಬಳಸುವುದಿಲ್ಲ. ಕಾರಣ ಅದರಿಂದ ಕೆಲವರ ಕಿವಿಗೆ ಕಿರಿ ಕಿರಿ ಆಗಬಹುದು.

## ಮಹಾನ್ ಪ್ರತಿಜ್ಞೆ



ರಾಷ್ಟ್ರೀಯ ಚಳುವಳಿಯೇ ಭಾಷಾವಾರು ಸಮುದಾಯಗಳನ್ನು ಪ್ರತ್ಯೇಕ ಸಮುದಾಯಗಳೆಂದು ಪರಿಗಣಿಸಿ, ಸ್ವತಂತ್ರ ಭಾರತದಲ್ಲಿ ಬ್ರಿಟಿಷ್‌ರು ರೂಪಿಸಿದ್ದ ಸಂಸ್ಥಾನಗಳನ್ನು ಭಾಷಾವಾರು ರಾಜ್ಯಗಳಾಗಿ ವಿಭಜಿಸಬೇಕೆಂದು ವ್ಯಕ್ತಪಡಿಸಿತ್ತು. ಅಲ್ಲದೆ, ಈ ರಾಜ್ಯಗಳಿಗೆ ಬಹಳಷ್ಟು ಸ್ವಾಯತ್ತತೆಯಿರುವಂತಹ ಸಂವಿಧಾನವನ್ನು ಶಿಫಾರಸು ಮಾಡಿತ್ತು.

೧೯೪೨ ರ ಆಗಸ್ಟ ೮ ರಂದು ಮಧ್ಯರಾತ್ರಿಯಲ್ಲಿ ಅಂಗೀಕರಿಸಿದ 'ಚಲೇಜಾವ್' ಚಳುವಳಿಯ ನಿರ್ಣಯವು ಮಹಾತ್ಮಾ ಗಾಂಧಿಯವರಿಗೆ ಚಳುವಳಿಯನ್ನು ಪ್ರಾರಂಭಿಸಲು ಅಧಿಕಾರವನ್ನು ನೀಡಿತು. ನಾನು ಆವಾಗ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿ ಅಲ್ಲಿದ್ದೆ. ಆ ನಿರ್ಣಯದಲ್ಲಿ, ಯುದ್ಧವನ್ನು ಎದುರಿಸುವ ಕಾರ್ಯಕ್ಕಾಗಿ, ಎಲ್ಲಾ ರಾಜಕೀಯ ಗುಂಪುಗಳೂ ಒಳಗೊಳ್ಳುವ ಹಾಗೆ ಭಾರತದಲ್ಲಿ ತಾತ್ಕಾಲಿಕ ಸರ್ಕಾರವನ್ನು ನೇಮಿಸಲು ಬ್ರಿಟಿಷ್ ಸರ್ಕಾರವನ್ನು ಕೇಳಿಕೊಳ್ಳಲಾಗಿತ್ತು. ಅದೇ ನಿರ್ಣಯದಲ್ಲಿ ಭಾರತ ಸರಕಾರಕ್ಕೆ ಸಂವಿಧಾನವನ್ನು ತಯಾರು ಮಾಡಲು ಸಂವಿಧಾನ ಸಭೆಯನ್ನು ರಚಿಸುವ ಯೋಜನೆಯನ್ನೂ ತಾತ್ಕಾಲಿಕ ಸರಕಾರ ಮಾಡುತ್ತದೆಯೆಂದೂ ಎ.ಐ.ಸಿ.ಸಿ. ಹೇಳಿದೆ. ಈ ಅಂಶ ಅತಿ ಪ್ರಾಮುಖ್ಯವಾದುದು.

"ಕಾಂಗ್ರೆಸಿನ ದೃಷ್ಟಿಯಲ್ಲಿ ಸಂವಿಧಾನವು ಸಂಯುಕ್ತ ಸ್ವರೂಪ (federal) ದ್ದಾಗಿದ್ದು, ಸಂಯುಕ್ತ ಘಟಕಗಳಿಗೆ ಅತೀ ಹೆಚ್ಚಿನ ಸ್ವಾಯತ್ತತೆಯನ್ನು ನೀಡುವುದಲ್ಲದೆ, ಉಳಿಕೆ ಅಧಿಕಾರವೂ (residuary powers) ಸಹ ಈ ಘಟಕಗಳಿಗೇ ಇರಬೇಕು."

ಕಾಂಗ್ರೆಸ್ ಪಕ್ಷವೇ ೧೯೪೨ ರ ಆಗಸ್ಟ ೮ ರಂದು 'ಚಲೇಜಾವ್' ಚಳುವಳಿಯ ಪ್ರಾರಂಭದಲ್ಲಿ ಈ ಮಹಾನ್ ವಾಗ್ದಾನವನ್ನು ನೀಡಿದೆ. ಈಗಿನ ಸಂವಿಧಾನ ಈ ವಾಗ್ದಾನಕ್ಕೆ ವಿರುದ್ಧವಾಗಿ ಹೋಗಿದೆ. ಸಂವಿಧಾನದ ೭ ನೇ ಶೆಡ್ಯೂಲಿನ ಮೊದಲನೇ ಪಟ್ಟಿಯ ಕೊನೆಯ ಅಂಶದ ಪ್ರಕಾರ ಎಲ್ಲಾ ಉಳಿಕೆ ಅಧಿಕಾರವು ಕೇಂದ್ರಕ್ಕೆ ಸೇರಲ್ಪಟ್ಟಿದೆ. ಇಂದು ನಾವು ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರೋಧದ ಹೋರಾಟದಲ್ಲಿ, ರಾಷ್ಟ್ರೀಯ ಚಳುವಳಿಯು ತೆಗೆದುಕೊಂಡ 'ಮಹಾನ್ ಪ್ರತಿಜ್ಞೆ' ಯನ್ನು ಸ್ವತಂತ್ರ ಭಾರತವು ಗೌರವಿಸಬೇಕೆಂದು ಹೇಳಿದರೆ, ನಮ್ಮನ್ನು ರಾಷ್ಟ್ರವಿರೋಧಿಗಳೆಂದೂ, ಪ್ರತ್ಯೇಕತಾವಾದಿಗಳೆಂದೂ ದೂಷಿಸಲಾಗುತ್ತಿದೆ.

ನಾವು ಪ್ರತ್ಯೇಕತಾವಾದಿಗಳಾಗಿರುವುದಾದರೆ, ಆಗ ಎ. ಐ. ಸಿ. ಸಿ. ಸಭೆಯಲ್ಲಿ ಪಾಲ್ಗೊಂಡು ಈ ನಿರ್ಣಯವನ್ನು ಅವಿರೋಧವಾಗಿ ಅಂಗೀಕರಿಸಿದವರೆಲ್ಲರೂ, ಮಹಾತ್ಮಾ ಗಾಂಧಿ, ಸರದಾರ್ ವಲ್ಲಬ್ಬಾಯಿ ಪಟೇಲ್. ರಾಜೇಂದ್ರ ಪ್ರಸಾದ್, ಜವಾಹರಲಾಲ್ ನೆಹರೂ, ಹಾಗೂ ಅಧ್ಯಕ್ಷತೆ ವಹಿಸಿದ್ದ ಮೌಲಾನಾ ಆಜಾದ್‌ರವರೂ ಸಹ ಪ್ರತ್ಯೇಕತಾವಾದಿಗಳಾಗುತ್ತಾರೆ. ಬಹು ಭಾಷಾ ಗುಣ ಹೊಂದಿರುವ ದೇಶವೊಂದರಲ್ಲಿ, ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆ ಇರುವ ಸಂಯುಕ್ತ ಸ್ವರೂಪ ವ್ಯವಸ್ಥೆ (federal structure) ಯನ್ನು ರೂಪಿಸದಿದ್ದಲ್ಲಿ, ದೇಶದ ಐಕ್ಯತೆಯನ್ನು ಸಾಧಿಸುವುದು ಅಸಾಧ್ಯವೆಂದು ಈ ನಾಯಕರೆಲ್ಲರೂ ಅರಿತೇ ಆ ಮಹಾನ್ ಪ್ರತಿಜ್ಞೆಯನ್ನು ಕೈಗೊಂಡಿದ್ದರು.

## ನಾವು ಪ್ರತ್ಯೇಕತಾವಾದಿಗಳ ವಿರುದ್ಧ ಹೋರಾಡಿದ್ದೇವೆ

ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡುವ ಕಾಲದಲ್ಲಿ ದೇಶದ ಐಕ್ಯತೆಯನ್ನು ಸಾಧಿಸಲಾಯಿತು. ಇತಿಹಾಸದುದ್ದಕ್ಕೂ ಭಾರತವು ಎಂದೂ

ರಾಜಕೀಯವಾಗಿ ಒಂದಾಗಿದ್ದ ದೇಶವಲ್ಲ. ಮೊಟ್ಟಮೊದಲನೆಯ ಬಾರಿಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧದ ಹೋರಾಟದಲ್ಲಿ ರಾಜಕೀಯ ಏಕತೆಯನ್ನು ಸಾಧಿಸಲಾಯಿತು. ಎಷ್ಟೇ ಸಂಖ್ಯೆಯ ರಾಷ್ಟ್ರೀಯ ಸಮಗ್ರತಾ ಸಮಿತಿ (National Integration Council) ಗಳನ್ನು ನೇಮಿಸುವುದರಿಂದ ಈ ಏಕತೆಯನ್ನು ನಿಶ್ಚಲವಾಗಿ ಸ್ಥಿರಗೊಳಿಸಲು ಸಾಧ್ಯವಿಲ್ಲ. ಬದಲು ಜನಸಾಮಾನ್ಯರ, ಹಿಂದುಳಿದ ಜನತೆಯ, ಕಾರ್ಮಿಕ ವರ್ಗದ, ರೈತರ, ಹಾಗೂ ಇತರೆ ಎಲ್ಲಾ ಶೋಷಿತ ಜನಾಂಗದ ಶೋಷಣೆಯ ವಿರುದ್ಧ ಹೋರಾಡುವುದರಲ್ಲಿ ಮಾತ್ರ ಈ ಏಕತೆಯನ್ನು ಸ್ಥಿರಪಡಿಸಲು ಸಾಧ್ಯ. ಆದ್ದರಿಂದ ನಮ್ಮ ಪಕ್ಷ, ಬೇರೆ ಯಾರಿಗಿಂತಲೂ ಈ ಪ್ರತ್ಯೇಕವಾದದ ಶಕ್ತಿಗಳ ವಿರುದ್ಧ ಹೋರಾಡುವುದರಲ್ಲಿ ಹೆಚ್ಚು ಆಸಕ್ತಿ ಹೊಂದಿದೆ. ಇದಕ್ಕೆ ಸಂಬಂಧವಾಗಿಯೇ ಮದ್ರಾಸಿನಲ್ಲಿ ಡಿ.ಎಂ.ಕೆ. ಪ್ರತ್ಯೇಕ ದ್ರಾವಿಡನಾಡಿನ ರಚನೆಗೆ ಹೋರಾಟ ಶುರುಮಾಡಿದಾಗ, ಆ ಸಿದ್ಧಾಂತದ ವಿರುದ್ಧ ತೀವ್ರವಾಗಿ ಹೋರಾಡಿದುದು ನಮ್ಮ ಪಕ್ಷ. ಆಗ ಪಾರ್ಲಿಮೆಂಟಿನ ಮುಖಂಡರಾಗಿದ್ದ ಸಿ. ಸುಬ್ರಹ್ಮಣ್ಯಂ ಅವರೂ ಸಹ ನನ್ನ ಬರಹಗಳಿಂದಲೇ ಉಲ್ಲೇಖಿಸುತ್ತಿದ್ದರು. ಒಟ್ಟಿನಲ್ಲಿ ನಾನು ಹೇಳುವುದೇನೆಂದರೆ, ರಾಷ್ಟ್ರೀಯ ಐಕ್ಯತೆಯನ್ನು ಸ್ಥಿರಗೊಳಿಸಲೂ, ತಮ್ಮ ಜವಾಬ್ದಾರಿಗಳನ್ನು ಸರಿಯಾಗಿ ನಿರ್ವಹಿಸಲೂ, ರಾಜ್ಯಗಳಿಗೆ ಹೆಚ್ಚಿನ ಅಧಿಕಾರವಿರಬೇಕು.

## ರಾಜ್ಯಗಳ ಅಧಿಕಾರ

೧೯೩೫ ರ ಸಂವಿಧಾನದ ೭ ನೇ ಶೆಡ್ಯೂಲಿನಲ್ಲಿ – ಆಕಸ್ಮಿಕವಾಗಿ ಆ ೭ ನೇ ಶೆಡ್ಯೂಲ್, ಈಗಿನ ಸಂವಿಧಾನದ ೭ ನೇ ಶೆಡ್ಯೂಲ್ ಆಗಿದೆ – ವಿವಿಧ ಸಂಸ್ಥಾನಗಳ ಮತ್ತು ಕೇಂದ್ರದ ಅಧಿಕಾರಗಳನ್ನೂ ಹಾಗೂ ಸಂಗತ (concurrent) ಪಟ್ಟಿಯನ್ನೂ ವ್ಯಾಖ್ಯಾನಿಸಲಾಗಿದೆ. ೧೯೩೫ ರ ಭಾರತ ಸರ್ಕಾರ ಕಾಯ್ದೆಯೂ ಸಹ ಕೇಂದ್ರ, ರಾಜ್ಯ ಮತ್ತು ಸಂಗತ ಪಟ್ಟಿಗಳನ್ನೊಳಗೊಂಡಿತ್ತು. ಈ ಪಟ್ಟಿಗಳಲ್ಲಿರುವ ವಿಷಯಗಳನ್ನು ಇಂದಿನ ಸಂವಿಧಾನಕ್ಕೆ ಹೋಲಿಸಿದರೆ, ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಒಂದೇ ಒಂದು ವ್ಯತ್ಯಾ

ಸವೆಂದರೆ, ೧೯೩೫ ರ ಭಾರತ ಸರ್ಕಾರ ಕಾಯ್ದೆಯು ಸಂಗತ (concurrent) ಪಟ್ಟಿಯಲ್ಲಿ ೩೬ ವಿಷಯಗಳಿದ್ದರೆ, ಇಂದಿನ ಸಂವಿಧಾನದಲ್ಲಿ ೪೭ ವಿಷಯಗಳಿವೆ. ಇದರ ಹೊರತಾಗಿ ಇನ್ನಾವುದೇ ವ್ಯತ್ಯಾಸಗಳಿಲ್ಲ. ಇದಕ್ಕೆ ಸಂಬಂಧಿಸಿದ ಇತರ ನಿಯಮಗಳೇನು ? ರಾಜ್ಯಗಳ ಜವಾಬ್ದಾರಿಗಳಾವುವು ?

ಸಾರ್ವಜನಿಕ ಶಿಸ್ತುಪಾಲನೆ, ಜೈಲುಗಳು, ಸ್ಥಳೀಯ ಸರ್ಕಾರ, ಸಾರ್ವಜನಿಕ ಆರೋಗ್ಯ, ದುರ್ಬಲರಿಗೆ ಮತ್ತು ನಿರುದ್ಯೋಗಿಗಳಿಗೆ ಪರಿಹಾರ ಸೌಕರ್ಯ, ಸಂಪರ್ಕ, ರಸ್ತೆ, ಸೇತುವೆ ನಿರ್ಮಾಣ, ಭೂ ಮಾರ್ಗಗಳು, ಆಂತರಿಕ ಜಲಮಾರ್ಗ, ಕೃಷಿ, ಅದಕ್ಕೆ ಸಂಬಂಧಪಟ್ಟ ವಿಷಯಗಳು, ನೀರು ಪೂರೈಕೆ, ನೀರಾವರಿ ಕಾಲುವೆಗಳು, ಒಳಚರಂಡಿ ವ್ಯವಸ್ಥೆ, ಭೂ ಸುಧಾರಣೆ, ಮೀನುಗಾರಿಕೆ, ಬಡ್ಡಿಸಾಲದ ವ್ಯವಹಾರ, ಕೃಷಿಕರ ಸಾಲ, ಕಲಾ ಕ್ಷೇತ್ರ, ನೃತ್ಯಗಳು, ಇವೆಲ್ಲವೂ ರಾಜ್ಯಗಳ ಹೊಣೆಗಾರಿಕೆಯಾಗಿದ್ದವು. ಈಗಿನ ಸಂವಿಧಾನವೂ ಸಹ ಇವೇ ಅಂಶಗಳನ್ನು (೭ನೇ ಶೆಡ್ಯೂಲಿನಲ್ಲಿನ ರಾಜ್ಯಪಟ್ಟಿಯಲ್ಲಿ) ಒಳಗೊಂಡಿದೆ.

ಈ ಎಲ್ಲಾ ಕಾರ್ಯಗಳನ್ನು ರಾಜ್ಯ ಸರ್ಕಾರ ನಿರ್ವಹಿಸಬೇಕು. ಆದರೆ ಹಣಕಾಸು ಮತ್ತು ಇತರ ಸಂಪನ್ಮೂಲಗಳ ಅವಕಾಶಗಳೆಷ್ಟು ? ಇದೂ ಸಹ ೧೯೩೫ ರ ಭಾರತ ಸರ್ಕಾರ ಕಾಯ್ದೆಯಲ್ಲಿಯಂತೆಯೇ ವ್ಯಾಖ್ಯಾನಿಸಲಾಗಿದೆ.

## ಹಣಕಾಸಿನ ಮೂಲಗಳು

ಕಂದಾಯ, ಭೂ ಕಂದಾಯ, ಕೃಷಿ ಆದಾಯ ತೆರಿಗೆ, ಕೃಷಿ ಭೂಮಿಯ ಮೇಲಿನ ಸುಂಕ, ಆಲ್ಕೊಹಾಲ್ ಪಾನೀಯಗಳ ಮೇಲಿನ ತೆರಿಗೆ (ಮಧ್ಯಪಾನ ನಿರೋಧದಿಂದ ಈ ಮೂಲವೂ ಹೋಗುತ್ತದೆ.) ಮಾರಾಟದ ತೆರಿಗೆ, ವೃತ್ತಿ ತೆರಿಗೆ, ಇವಿಷ್ಟೇ ರಾಜ್ಯ ಸರ್ಕಾರದ ಹಣಕಾಸಿನ ಮೂಲಗಳು. ವಾಸ್ತವವಾಗಿ ಭೂಕಂದಾಯ ಮತ್ತು ಮಾರಾಟ ತೆರಿಗೆಗಳೆರಡೇ ಮೂಲಗಳೆಂದು ಹೇಳಬಹುದು. ಆದರೆ ರಾಜ್ಯಗಳಿಗೆ ಜನತೆಯ ಎಲ್ಲಾ ಅವಶ್ಯಕತೆಗಳನ್ನೂ, ಕಾರ್ಯಗಳನ್ನೂ ನಿರ್ವಹಿಸುವ ಜವಾಬ್ದಾರಿಯನ್ನು ಹೊರಿಸಲಾಗಿದೆ.

ಈ ಕಾರಣಕ್ಕಾಗಿಯೇ ಕಾಂಗ್ರೆಸ್ ಪಕ್ಷ ಮತ್ತು ರಾಷ್ಟ್ರೀಯ ಚಳುವಳಿಯು ೧೯೩೫ ರ ಕಾಯ್ದೆಯನ್ನು ತಿರಸ್ಕರಿಸಿದ್ದದು. ಜನತೆಯ ಗಮನವನ್ನು ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರೋಧದ ಹೋರಾಟದಿಂದ ಮಂತ್ರಿಮಂಡಳಗಳ ಕಡೆ ತಿರುಗಿಸುವ ದುರುದ್ದೇಶದಿಂದ ಒಂದದ್ದಾಗಿರುವುದರಿಂದಲೇ, ಆ ೧೯೩೫ ರ ಕಾಯ್ದೆಯನ್ನು ತಿರಸ್ಕರಿಸಲಾಯಿತು. ಆ ಕಾರಣಕ್ಕಾಗಿಯೇ ಸಂಸ್ಥಾನಗಳಲ್ಲಿ ಅಧಿಕಾರ ವಹಿಸಿಕೊಳ್ಳಬೇಕೇ ಬೇಡವೇ, ಎನ್ನುವುದರ ಬಗ್ಗೆ ಬಿಸಿ ಬಿಸಿ ಚರ್ಚೆಗಳು ನಡೆದವು.

ಅದೇ ರೀತಿ ಇಂದಿನ ಸಂವಿಧಾನದಲ್ಲಿನ ಈ ರಾಜ್ಯಗಳೂ ಸಹ ದೊಡ್ಡ ಬಂಡವಾಳಗಾರರ ಪ್ರಾಭಲ್ಯವಿರುವ ಕೇಂದ್ರ ಸರ್ಕಾರದ ಶೋಷಣೆಯ ವಿರುದ್ಧ ಹೋರಾಡುವ ಜನತೆಯ ಗಮನವನ್ನು ರಾಜ್ಯ ಸರ್ಕಾರಗಳೆಡೆಗೆ ತಿರುಗಿಸಲೆಂದೇ ಇವೆ. ಅದೇ "ಒಡೆದು ಆಳುವ ನೀತಿ" ಯನ್ನೇ ಈ ಸಂವಿಧಾನದಲ್ಲೂ ಅಳವಡಿಸಲಾಗಿದೆ. ಇದೇ ನನ್ನ ಮುಖ್ಯ ಆಪಾದನೆ.

## ರಾಜಕೀಯ ಪ್ರಭಾವ

ಇವುಗಳಲ್ಲದೆ, ರಾಜ್ಯಕ್ಕಿರುವ ಇತರೆ ಆದಾಯ ಮೂಲವೆಂದರೆ, ಕೇಂದ್ರ ಸರ್ಕಾರ ಸಂಗ್ರಹಿಸಿದ ಆದಾಯ ಕರದ ಭಾಗ. ಭಾರತ ಸರ್ಕಾರ ಸಂಗ್ರಹಿಸುವ ಎಲ್ಲಾ ಆದಾಯ ಕರವನ್ನು ಹಣಕಾಸು ಆಯೋಗ ಶಿಫಾರಸು ಮಾಡಿದ ಸೂತ್ರದ ಆಧಾರದ ಮೇಲೆ ರಾಜ್ಯಗಳಿಗೆ ಹಂಚಬಹುದು. ಇದಲ್ಲದೆ, ಸ್ವಲ್ಪ ಸಹಾಯ ಧನ ಪಡೆಯುವ ಅವಕಾಶವಿದೆ. ಸಹಾಯ ಧನಕ್ಕಾಗಿ ರಾಜ್ಯ ಸರ್ಕಾರಗಳು ಕೇಂದ್ರದ ಮುಂದೆ ಹೋಗಿ ಭಿಕ್ಷಾಪಾತ್ರ ಹಿಡಿಯಬೇಕು. ಅದೂ ಸಹ ಕೇಂದ್ರದ ಇಚ್ಛೆ, ಅಭಿಲಾಷೆಗಳ ಮೇಲೆಯೇ ಅವಲಂಬಿಸಿದೆ. ಇಲ್ಲಿ ಎಲ್ಲಾ ತರಹದ ರಾಜಕೀಯವೂ ಪ್ರಭಾವ ಬೀರುತ್ತದೆ. ೧೯೭೧ ರ ಚುನಾವಣೆಯಲ್ಲಿ ಇಂದಿರಾ ಗಾಂಧಿಯವರಿಗೆ ಡಿ. ಎಂ. ಕೆ. ಯ ಸಹಾಯ ಬೇಕಾಗಿದ್ದುದರಿಂದ ೧೯೭೦ ರಲ್ಲಿ ಅವರು ಮದ್ರಾಸಿಗೆ ಹೋದಾಗ ಬರಗಾಲ ಪರಿಹಾರವೆಂದು ೨೦ ಕೋಟಿ ರೂ. ಮಂಜೂರು ಮಾಡಿದರು. ಇದೇ ರಾಜಕೀಯ ಪ್ರಭಾವ. ಆದ್ದರಿಂದ ರಾಜ್ಯಗಳು ಕೇಂದ್ರದ ಇಚ್ಛೆ ಅಭಿಲಾ

ಪೆಯ ಮೇಲೆಯೇ ಅವಲಂಬಿಸಬೇಕಾಗಿದೆ. ರಾಜಕೀಯ ಪ್ರಭಾವ, ರಾಜಕೀಯ ಪರಿಗಣನೆಗಳು ಕೇಂದ್ರ ಸರ್ಕಾರದ ಮೇಲೆ ಪರಿಣಾಮ ಬೀರುತ್ತವೆ. ಕೇಂದ್ರ ಸರ್ಕಾರ ಇವುಗಳಿಂದ ಮುಕ್ತವಾಗಿದೆಯೆಂದು ಯಾರೂ ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ರಾಜ್ಯಗಳು ಭಿಕ್ಷಾಪಾತ್ರ ಹಿಡಿಯಬೇಕು.

## ಕೇಂದ್ರದ ಮೇಲೆ ಅವಲಂಬನೆ

ಅಲ್ಲದೆ, ೧೯೩೫ ರ ಕಾಯ್ದೆಯ ಪ್ರಕಾರ ಕಾರ್ಪೋರೇಷನ್ ತೆರಿಗೆ, ಆದಾಯ ತೆರಿಗೆಯ ಭಾಗವಾಗುವುದಿಲ್ಲ. ಈಗಿನ ಸಂವಿಧಾನ ಕಾರ್ಪೋರೇಷನ್ ತೆರಿಗೆಯನ್ನು ಆದಾಯ ತೆರಿಗೆ ಎಂದು ಪರಿಗಣಿಸುತ್ತದೆ. ಅದರೆ ಇಲ್ಲಿ ಇನ್ನೊಂದು ನಿಯಮವೂ ಸಹ ಇದೆ. ಈ ನಿಯಮವನ್ನು ಮೊರಲೆಂದೇ ೧೯೩೫ರ ಕಾಯ್ದೆಯಲ್ಲಿ ಹೀಗೆ ಹೇಳಿದೆ: "ಒಂದು ವೇಳೆ ಭಾರತ ಸರ್ಕಾರ ಆದಾಯ ಕರದ ಮೇಲೆ ಸರ್‌ಚಾರ್ಜನ್ನು ವಿಧಿಸಿದರೆ,-ಅದೂ ಕೂಡ ಹೆಚ್ಚಿಸಿದ ಆದಾಯ ಕರ; ಆದರೆ ಅದನ್ನು ಸರ್‌ಚಾರ್ಜ ಎಂದು ಕರೆಯಲಾಯಿತಷ್ಟೇ-ಆ ಸರ್‌ಚಾರ್ಜನಿಂದ ಬಂದ ಹಣ, ರಾಜ್ಯಗಳಿಗೆ ಹಂಚುವ ಭಾಗಕ್ಕೆ ಹೋಗುವದಿಲ್ಲ."ಇದನ್ನೇ ಈ ಸಂವಿಧಾನದಲ್ಲೂ ಪುನರುಚ್ಚರಿಸಲಾಗಿದೆ. ಅದ್ದರಿಂದಲೇ ನಾನು ಹೇಳಿದ್ದು; ಹಣ ಕಾಸಿಗೆ ಸಂಬಂಧಪಟ್ಟಂತೆ ರಾಜ್ಯಗಳು ಕೇಂದ್ರದ ಇಚ್ಛೆ, ಅಭಿಲಾಷೆಯ ಮೇಲೆಯೇ ಅವಲಂಬಿಸಬೇಕಾಗಿದೆ ಎಂದು.

ಸದಾ ಅಧಿಕಗೊಳ್ಳುವ ಆದಾಯ ಮೂಲಗಳು, ಉದಾ: ವ್ಯಾಪಾರ ತೆರಿಗೆ ಅಂದರೆ ರಫ್ತು ಮತ್ತು ಆಮದುಗಳ ಮೇಲಿನ ಸುಂಕ-ಎಕ್ಸೈಜ್ ಸುಂಕ-ಮುಂತಾದವುಗಳೆಲ್ಲವೂ ಕೇಂದ್ರ ಸರ್ಕಾರಕ್ಕೆ ಮೀಸಲಾಗಿವೆ. ೧೯೫೦ ರಲ್ಲಿ ಎಕ್ಸೈಜ್ ಸುಂಕ ೬೭ ಕೋಟಿ ರೂ. ಗಳಷ್ಟಿದ್ದದ್ದು, ಇಂದು ೧೯೦೦ ಕೋಟಿ ರೂ. ಗಳಷ್ಟಾಗಿದೆ. ವ್ಯಾಪಾರ ತೆರಿಗೆಯ ಆದಾಯವೂ ಸಹ ಹೆಚ್ಚಾಗಿದೆ.

ಸಂವಿಧಾನದ ಒಂದು ಅನುಚ್ಛೇದದ ಪ್ರಕಾರ ರಾಜ್ಯಗಳು ತಮ್ಮ ಆದಾಯದ ಮೇಲೆ ಸಾಲವನ್ನು ತೆಗೆಯಬಹುದು.ಅದರೆ ಅದೇ ಅನುಚ್ಛೇದದ (೩ನೇ) ಉಪವಿಧಿಯು ಯಾವುದೇ ರಾಜ್ಯ,ಕೇಂದ್ರಕ್ಕೆ ಕೊಡಬೇಕಾದ ಸಾಲವನ್ನು ವಾಪಾಸುಕೊಟ್ಟಿರದಿದ್ದಲ್ಲಿ ರಾಷ್ಟ್ರಾಧ್ಯಕ್ಷರ ಅನುಮತಿಯಿಂದ ಮಾತ್ರ ಅಂತಹ

ಸಾಲವನ್ನು ತೆಗೆಯಬಹುದು ಎಂದು ಹೇಳುತ್ತದೆ. ವಾಸ್ತವವಾಗಿ ಮೊದಲನೆಯ ನಿಯಮ ಅಕ್ರಮವಲ್ಲವೇ? ಕೇಂದ್ರಕ್ಕೆ ಸಾಲವನ್ನು ವಾಪಾಸು ಕೊಡಬೇಕಿಲ್ಲದ ರಾಜ್ಯ ಯಾವುದಾದರೂ ಇದೆಯೇ? ಇಪ್ಪೊಂದು ಸಂಪನ್ಮೂಲಗಳಿಂದ ಯಾವ ರಾಜ್ಯ ತಾನೇ ಕೇಂದ್ರದ ಸಾಲದಿಂದ ಮುಕ್ತವಾಗಿರಲು ಸಾಧ್ಯ? ಈ ಹಣಕಾಸಿನ ನ್ಯೂನ್ಯತೆಯನ್ನೂ, ಅಸಮತೆಯನ್ನೂ ತೊಡೆದು ಹಾಕದಿದ್ದಲ್ಲಿ ರಾಜ್ಯಗಳು ತಮ್ಮ ಜವಾಬ್ದಾರಿಯನ್ನು ನೆರವೇರಿಸಲು ಹೇಗೆ ಸಾಧ್ಯ.?

## ಅಧಿಕಾರಗಳ ಮೇಲೆ ಆಕ್ರಮಣ

ಸಂವಿಧಾನದ ರಾಜ್ಯಪಟ್ಟಿಗೆ ಸೀಮಿತವಾಗಿಯೇ ಇರುವ ರಾಜ್ಯ ಸರಕಾರಗಳ ಅಧಿಕಾರ ಏನಾಗಿದೆ? ರಾಜ್ಯ ಸರಕಾರಗಳು ರಾಜ್ಯ ಪಟ್ಟಿಯಲ್ಲಿ ನಮೂದಿಸಿದ ವಿಷಯಗಳ ಬಗೆಗೆ ಅಂಗೀಕರಿಸಿದ ಯಾವುದೇ ಶಾಸನವನ್ನು ಸಹ ಅನುಚ್ಛೇದ ೨೦೦ ಮತ್ತು ೨೦೧ರ ಪ್ರಕಾರ ಕೇಂದ್ರ ಸರಕಾರವು ರಾಷ್ಟ್ರಪತಿಗಳ ಅನುಮತಿಗಾಗಿ ಕಾದಿಡಬಹುದು. ಹಿಂದಿನ ಅನೇಕ ವರ್ಷಗಳಲ್ಲಿ ಆದದ್ದೇನು?

ಸಂವಿಧಾನದ II ನೇ ಪಟ್ಟಿಯ ಪ್ರಕಾರ ಪ್ರತಿಯೊಂದು ಭೂಸುಧಾರಣಾ ಕ್ರಮವೂ ರಾಜ್ಯಗಳಿಗೆ ಮೀಸಲಾದ ವಿಷಯ. ಆದರೇನು ಬಂತು? ಪ್ರತಿಯೊಂದು ಭೂಸುಧಾರಣಾ ಶಾಸನವನ್ನು ವಿಧಾನ ಸಭೆಯಲ್ಲಿ ಚರ್ಚೆಗಿಡುವದಕ್ಕಿಂತ ಮುಂಚೆ ಕೇಂದ್ರ ಸರಕಾರಕ್ಕೆ ಕಳುಹಿಸಿ ಅದರ ಒಪ್ಪಿಗೆಯನ್ನು ಪಡೆಯಬೇಕು. ಕೇಂದ್ರದಲ್ಲಿ ಇದನ್ನು ನಿರ್ಧರಿಸುವವರಾರು? ರಾಜ್ಯದ ಮುಖ್ಯಮಂತ್ರಿಯು ಪ್ರಧಾನಿಯೊಂದಿಗೆ ಚರ್ಚಿಸಲು ಅವಕಾಶವಿಲ್ಲಾ. ಕಾರಣ ಪ್ರಧಾನಮಂತ್ರಿಯವರಿಗೆ ಪುರಸೊತ್ತಿರುವುದಿಲ್ಲ. ಅದು ನೇರವಾಗಿ ಉಪಕಾರ್ಯದರ್ಶಿಯವರ ಕೈಗೆ ಹೋಗುತ್ತದೆ.ಆತ ತಾನೇ ತೀರ್ಮಾನಿಸಿ ಒಂದು ಟಿಪ್ಪಣೆಯನ್ನು ಬರೆಯುತ್ತಾನೆ.

ಆದ್ದರಿಂದ ಸಂವಿಧಾನದ ಪ್ರಕಾರ ರಾಜ್ಯ ಸರಕಾರದ ಸಮರ್ಥನೆ ಇದ್ದಂತಹ ವಿಷಯಗಳ ಬಗೆಗೂ ಸಹ ಶಾಸನಗಳನ್ನು ಕೇಂದ್ರಕ್ಕೆ ಕಳುಹಿಸಲಾಗುತ್ತದೆ. ಅಂತಹ ಶಾಸನ ಮಾಡುವದಕ್ಕೆ ಮುಂಚೆ ಅನುಮತಿ ಪಡೆಯಬೇಕು; ಇಲ್ಲವೇ ಶಾಸನವನ್ನು ಅಂಗೀಕರಿಸಿದ ನಂತರ ರಾಜ್ಯಪಾಲರು ಕೇಂದ್ರದ ಅನುಮತಿ

ಗಾಗಿ ಕಳುಹಿಸುತ್ತಾರೆ. ಈ ಪ್ರಶ್ನೆ ಮುಖ್ಯವಾಗಿ ನೌಕರಶಾಹಿಯ ವಿರುದ್ಧ ಪ್ರಜಾಪ್ರಭುತ್ವದ ಹೋರಾಟವಾಗಿದೆ.

## ಕೇಂದ್ರದ ಕೊಡಲಿ

ಈಗಿರುವ ನಿಯಮಗಳ ಪ್ರಕಾರ ಒಂದು ವೇಳೆ ಕೇಂದ್ರ ಸರಕಾರ ಭಿನ್ನ ಗುಣಗಳನ್ನು ಹೊಂದಿದ್ದು, ರಾಜ್ಯ ಸರಕಾರ ಕೇಂದ್ರಕ್ಕಿಂತ ಹೆಚ್ಚು ಪುರೋಗಾಮಿಯಾಗಿದ್ದು ಕೇಂದ್ರವು ಇಚ್ಚಿಸದಂತಹ, ಅಥವಾ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಪಕ್ಷ ಇಚ್ಚಿಸದಂತಹ ಭೂಸುಧಾರಣಾ ಶಾಸನವನ್ನು ಅಂಗೀಕರಿಸಿದರೆ, 'ಇದನ್ನು ಬದಲಿಸಿ ಅದನ್ನು ಬದಲಿ ; ಇಲ್ಲದಿದ್ದರೆ ನಿಮಗೆ ಅನುಮತಿ ನೀಡುವುದಿಲ್ಲ' ಎಂದು ಕೇಂದ್ರವು ಕೊಡಲಿ ಹಿಡಿದು ನಿಲ್ಲುತ್ತದೆ. ಇಂದು ಭೂಸುಧಾರಣಾ ಕಾಯ್ದೆಗಳಿಗಷ್ಟೇ ಅಲ್ಲದೆ ರಾಜ್ಯ ಸರಕಾರಗಳ ಎಲ್ಲ ಶಾಸನಗಳಿಗೂ ಸಹ ಈ ಪರಿಸ್ಥಿತಿ ಬಂದೊದಗಿದೆ. ಹೀಗಾಗಿ ರಾಜ್ಯಗಳನ್ನು ಮುನಸಿಪಾಲಟಿಗಳ ಮಟ್ಟಕ್ಕೆ ಇಳಿಸಲಾಗಿದೆ.

## ೧೯೫೨ ರಲ್ಲಿ ರಾಜಾಜಿ ಹೇಳಿದ್ದೇನು ?

೧೯೫೭ರಲ್ಲಿ ಮದ್ರಾಸ್ ವಿಧಾನ ಸಭೆಯಲ್ಲಿ ರಾಜಗೋಪಾಲಾಚಾರಿಯವರು ಮುಖ್ಯಮಂತ್ರಿಗಳಾಗಿದ್ದಾಗ ನಾನು ವಿರೋಧ ಪಕ್ಷದ ನಾಯಕನಾಗಿದ್ದೆ. ಅವರ ಪಕ್ಷದ ಸದಸ್ಯರೇ ಅನೇಕ ಬೇಡಿಕೆಗಳನ್ನು ಮುಂದಿಟ್ಟಾಗ ಅವರು ಹೀಗೆ ಹೇಳಿದ್ದರು:

"ಈ ಎಲ್ಲಾ ಬೇಡಿಕೆಗಳನ್ನು ಮುಂದಿಡುವುದರಿಂದ ಏನು ಪ್ರಯೋಜನ ? ಈ ಸಂವಿಧಾನದಲ್ಲಿ ರಾಜ್ಯ ಅಂದರೇನು ? ಅದೊಂದು ರಮ್ಯವಾದ ಮುನ್ಸಿಪಾಲಟಿಯಷ್ಟೆ."

ಆಗ ನಾನು ಹೇಳಿದ್ದೆ-'ಮಿಸ್ಟರ್ ರಾಜಾಜಿ, ನೀವೀಗ ನನ್ನ ಅಭಿಪ್ರಾಯವನ್ನು ಒಪ್ಪಿದ್ದೀರಿ. ಹಾಗಿದ್ದಾಗ ನೀವು ಸಂವಿಧಾನದ ಬದಲಾವಣೆಗೆ ಕೇಂದ್ರ ಸರಕಾರದ ವಿರುದ್ಧ ಹೋರಾಡಲು ನನ್ನೊಂದಿಗೆ, ನನ್ನ ಪಕ್ಷದೊಂದಿಗೆ, ಏಕೆ ಸೇರಿಕೊಳ್ಳಬಾರದು.?'

ರಾಜಾಜಿಯ ಮರು ಉತ್ತರ-'ನಾನು ಕೇಂದ್ರದ ವಿರುದ್ಧ ಹೋರಾಡಬೇಕೆಂದು ರಾಮಮೂರ್ತಿಯವರು ಬಯಸುತ್ತಾರೆ. ನಾನೇಕೆ ಕೇಂದ್ರದ ವಿರುದ್ಧ ಹೋರಾಡಬೇಕು? ಅವರೆಲ್ಲ ನನ್ನ ಸ್ನೇಹಿತರೆ. ತಿಳಿಹೇಳಿ ಕೆಲಸ ಮಾಡಿಸಿಕೊಳ್ಳಲು ಸಾಧ್ಯವಿರುವುದರಿಂದ ನಾನೇಕೆ ಅವರನ್ನು ಎದುರು ಹಾಕಿಕೊಳ್ಳಬೇಕು ?'

## ರಮ್ಯವಾದ ಪಂಚಾಯತ್

ಇದು ರಾಜಗೋಪಾಲಾಚಾರಿಯವರೇ ಹೇಳಿದ್ದು, ಮದ್ರಾಸ್ ವಿಧಾನ ಸಭೆಯ ನಡಾವಳಿಕೆಯ ದಾಖಲಿನಲ್ಲಿದೆ. ಅವರ ತಿಳಿಹೇಳುವಿಕೆಯಿಂದ ಆದದ್ದೇನು? ಕೇಂದ್ರದ ಅಧಿಕಾರ ಮತ್ತಷ್ಟು ಹೆಚ್ಚುತ್ತಾ ಹೋಯಿತು. ೧೯೫೦ರಲ್ಲಿ ಅಳವಡಿಸಿದ ಸಂವಿಧಾನಕ್ಕೆ ಮತ್ತೆ ಮತ್ತೆ ತಿದ್ದುಪಡಿಗಳು ಸೇರಿದವು. ಕೇಂದ್ರವು ಹೆಚ್ಚು ಹೆಚ್ಚು ಅಧಿಕಾರವನ್ನು ಕಬಳಿಸಿ, ಇಂದು ರಾಜ್ಯಗಳು ಏನಂತ ಕರೆಯಬೇಕೋ ಗೊತ್ತಿಲ್ಲ. ಆಗ ರಾಜಾಜಿಯವರು ಕರೆದ ಹಾಗೆ ರಮ್ಯವಾದ ಮುನ್ಸಿಪಾಲಟಿಗಳೆಂದು ಕರೆಯಲಾಗುವುದಿಲ್ಲ; ರಮ್ಯವಾದ ಪಂಚಾಯತ್ ಮಟ್ಟಕ್ಕೆ ಇಳಿಸಲ್ಪಟ್ಟಿವೆ.

## ಇಂದಿನ ಬದಲಾದ ಪರಿಸ್ಥಿತಿ

ಇಂದು ರಾಜ್ಯಗಳು ರಮ್ಯವಾದ ಪಂಚಾಯತ್ ಮಟ್ಟಕ್ಕೆ ಇಳಿಸಲಾಗಿವೆಯೆಂದೂ, ಈ ವಿಷಯದ ಬಗ್ಗೆ ರಾಷ್ಟ್ರಮಟ್ಟದ ಚರ್ಚೆಯಾಗಬೇಕೆಂದೂ, ಹೇಳುವುದರಲ್ಲಿ ತಪ್ಪೇನಿದೆ? ಕೇಂದ್ರ ಮತ್ತು ಎಲ್ಲಾ ರಾಜ್ಯಗಳಲ್ಲಿಯೂ ಒಂದೇ ಪಕ್ಷ ಅಧಿಕಾರದಲ್ಲಿದ್ದಾಗ ತೊಂದರೆಯಿರಲಿಲ್ಲ; ಎಲ್ಲಾ ಕೌಟುಂಬಿಕ ವ್ಯವಹಾರದಂತಿತ್ತು. ಕೇಂದ್ರವು ಹೊರಡಿಸಿದ ಒಂದು ಸುತ್ತೋಲೆಯನ್ನು ಎಲ್ಲಾ ರಾಜ್ಯ ಸರಕಾರಗಳು ಮಾನ್ಯ ಮಾಡುತ್ತಿದ್ದವು. ಆದರೆ ಆ ದಿನಗಳು ಕಳೆದುಹೋಗಿವೆ. ಅದೀಗ ಸಾಧ್ಯವಿಲ್ಲ. ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಪಕ್ಷಗಳು ಅಧಿಕಾರಕ್ಕೆ ಬಂದಿವೆ ಎಂದೂ, ಅವು ತಮ್ಮದೇ ಆದ ನೀತಿಯನ್ನು ಹೊಂದಿವೆ ಎಂದೂ, ರಾಷ್ಟ್ರಾಧ್ಯಕ್ಷ ಸಂಜೀವರೆಡ್ಡಿಯವರೇ ಹೇಳಿದ್ದಾರೆ.

ಪಶ್ಚಿಮ ಬಂಗಾಳದಲ್ಲಿ ನಮ್ಮ ಸರಕಾರ ತನ್ನದೇ ಆದ ನೀತಿಯನ್ನು ಹೊಂದಿದೆ. ಆ ನೀತಿಯನ್ನು ಜಾರಿಗೊಳಿಸಲು ನಾವು ಬದ್ಧರಾಗಿದ್ದೇವೆ. ಉದಾಹರಣೆಯಾಗಿ, ನಾಲ್ಕು ತಿಂಗಳ ಹಿಂದೆ ಸ್ವಯಂವ್ಯವಸಾಯಕ್ಕೆ ಭೂಮಿಯನ್ನು ಹಿಂತೆಗೆದುಕೊಳ್ಳಲು ಷರತ್ತುಗಳನ್ನು ವ್ಯಾಖ್ಯಾನಿಸಿ ಪಶ್ಚಿಮ ಬಂಗಾಳ ಶಾಸನ ಸಭೆಯು ನಿರ್ಣಯವೊಂದನ್ನು ಅಂಗೀಕರಿಸಿದೆ. ಸ್ವಯಂವ್ಯವಸಾಯವೆಂದರೆ ಏನೆಂದು ಅದರಲ್ಲಿ ಹೇಳಲಾಗಿದೆ. ಭೂಮಾಲಕ ಸ್ವಂತ ಅಥವಾ ಅವರ ಕುಟುಂಬದವರು ಸ್ವಂತ ಭೌತಿಕ ಪರಿಶ್ರಮದಲ್ಲಿ ಒಳಗೊಂಡರೆ ಹಾಗೂ ಕೆಲವಷ್ಟು ದಿನಗಳ ಕಾಲವಾದರೂ ಅದೇ ಹಳ್ಳಿಯಲ್ಲಿ ವಾಸವಾಗಿದ್ದರೆ ಮಾತ್ರ ಭೂಮಿಯನ್ನು ಹಿಂದೆ ಪಡೆಯಲು ಸಾಧ್ಯ ಎಂದು ಆ ನಿರ್ಣಯದಲ್ಲಿ ಹೇಳಿದೆ. ಇಷ್ಟಿದ್ದರೆ ಮಾತ್ರ ಸ್ವಂತ ವ್ಯವಸಾಯವಾಗಲು ಸಾಧ್ಯ. ಇದಿನ್ನು ರಾಷ್ಟ್ರಾಧ್ಯಕ್ಷ, ಅಂದರೆ ಭಾರತ ಸರಕಾರದ ಅನುಮತಿಗಾಗಿ ಕಾಯುತ್ತಿದೆ. ಜನತಾ ಪಕ್ಷ ಈ ನಿರ್ಣಯವನ್ನು ಇಚ್ಛೆಪಡದಿರಬಹುದು. ಈ ವಿಷಯ ಪೂರ್ತಿಯಾಗಿ ರಾಜ್ಯ ವಿಧಾನ ಸಭೆಯ ಅಧಿಕಾರದೊಳಗೆ ಬರುತ್ತಿದ್ದರೂ, ಜನತಾ ಪಕ್ಷ ಇಚ್ಛೆಪಡದ ಕಾರಣ ನಾವು ಪಶ್ಚಿಮ ಬಂಗಾಳದ ಜನತೆಗೆ ಕೊಟ್ಟ ಭರವಸೆಗಳನ್ನು ಈಡೇರಿಸಲು ಸಾಧ್ಯವಾಗುತ್ತಿಲ್ಲ.

ಎಷ್ಟು ದಿನ ಹೀಗೇ ಹೋಗಲು ಸಾಧ್ಯ? ಪರಿಸ್ಥಿತಿ ಹೀಗೇ ಮುಂದುವರಿದರೆ ಸ್ವಾಭಾವಿಕವಾಗಿ ವಿವಿಧ ರಾಜ್ಯಗಳ ಜನತೆ ಕೇಂದ್ರವನ್ನು ದೂರೀಕರಿಸುತ್ತಾರೆ. ವಿಛಿದ್ರಕ ಶಕ್ತಿಗಳು ಮತ್ತೆ ತಲೆ ಎತ್ತುತ್ತವೆ. ಅವು ತಲೆ ಎತ್ತಕೂಡದೆಂಬ ತೀವ್ರ ಕಾಳಜಿಯಿಂದಲೇ ಈ ಪ್ರಶ್ನೆಯನ್ನು ಸರಿಯಾಗಿ ಚರ್ಚಿಸಿ ಬಗೆಹರಿಸಲು ನಾವು ಉತ್ಸುಕರಾಗಿದ್ದೇವೆ.

ಕೆಲವು ದಿನಗಳ ಹಿಂದೆ ನಾನೊಂದು ವರದಿಯನ್ನು ಓದಿದ್ದೆ. ಅದು ನಿಜವೋ ಸುಳ್ಳೋ ನನಗೆ ಗೊತ್ತಿಲ್ಲ. ಅದು 'ಹಿಂದೂಸ್ತಾನ್ ಸ್ಟ್ಯಾಂಡರ್ಡ್' ಪತ್ರಿಕೆಯಲ್ಲಿ ಮಾತ್ರ ಪ್ರಕಟವಾಗಿತ್ತು. ಬೇರೆ ಪತ್ರಿಕೆಗಳಲ್ಲಿ ನಾನು ಕಂಡಿಲ್ಲ. "ಪಶ್ಚಿಮ ಬಂಗಾಳದಲ್ಲಿ ಸಿ. ಪಿ. ಎಂ. ಪಕ್ಷವು ಕೆಲವು ಮಾಡಬಾರದಂತಹ ಕೆಲಸಗಳನ್ನು ಮಾಡಿದೆ, ಎಂದು ಪ್ರಧಾನಿ ಶ್ರೀ ಮುರಾರ್ಜಿ ದೇಸಾಯಿಯವರು ಹೇಳಿದರು. 'ರಾಜಹಂಸ್' ವಿಶೇಷ ವಿಮಾನವನ್ನು ಏರುವುದಕ್ಕಿಂತ ಮುಂಚೆ

ಕೊಟ್ಟ ಸಂದರ್ಶನದಲ್ಲಿ ಹೀಗೆ ಹೇಳಿದರು. ಆದರೆ ಅದನ್ನು ವಿವರಿಸಲು ಮಾತ್ರ ತಿರಸ್ಕರಿಸಿದರು" ಎಂದಿತ್ತು.

ಪಶ್ಚಿಮ ಬಂಗಾಳ ಸರ್ಕಾರದ ಮೇಲೆ ನಿಮಗೇನಾದರೂ ವಿಶಿಷ್ಟ ಆಪಾದನೆಗಳಿದ್ದರೆ, ಅದನ್ನು ಧೈರ್ಯವಾಗಿ ಎಲ್ಲರ ಮುಂದೆ ಹೇಳಿ. 'ನೀವಿಲ್ಲಿ ತಪ್ಪಿದ್ದೀರಿ' ಎಂದು ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯುವರಿಗೆ ನೇರವಾಗಿ ಹೇಳಿ. ಅವರು ನಿಮ್ಮ ನೀತಿಗೆ ಸರಿಹೋಗದಂತೆ ಕೆಲವೊಂದೇನಾದರೂ ಮಾಡಿರಬಹುದು. ಆದರೆ ಜನತಾ ಪಕ್ಷದ ನೀತಿಯನ್ನು ಕಾರ್ಯಾಚರಣೆಗೊಳಿಸಲು ನಾವು ಪಶ್ಚಿಮ ಬಂಗಾಳ ಸರ್ಕಾರವನ್ನೇನೂ ನಡೆಸುತ್ತಿಲ್ಲ. ಜನತಾ ಪಕ್ಷ ನಮ್ಮನ್ನು ಚುನಾಯಿಸಲಿಲ್ಲ. ನಿಜವಾಗಿ ಹೇಳಬೇಕೆಂದರೆ ಪಶ್ಚಿಮ ಬಂಗಾಳ ಜನತೆ, ಜನತಾ ಪಕ್ಷವನ್ನು ತಿರಸ್ಕರಿಸಿ ನಮ್ಮ ಪಕ್ಷವನ್ನು ನಾವು ಕೊಟ್ಟ ಭರವಸೆಗಳನ್ನು ಈಡೇರಿಸಲು ಚುನಾಯಿಸಿತು. ಕೇಂದ್ರ ಸರ್ಕಾರಕ್ಕೆ ಹಸ್ತಕ್ಷೇಪ ಮಾಡಲು ಯಾವ ಹಕ್ಕೂ ಇಲ್ಲ.

ಒಂದು ವೇಳೆ ಆ ಸರ್ಕಾರ ಸಂವಿಧಾನದ ನಿಯಮಗಳನ್ನು ಉಲ್ಲಂಘಿಸಿದರೆ, ಅದನ್ನು ತೀರ್ಮಾನಿಸಲು ಸುಪ್ರೀಂ ಕೋರ್ಟು ಇದೆ. ಆದರೆ ಈ ನಿಯಮಗಳಿಗೆ ಬದ್ಧವಾಗಿರುವವರೆಗೂ ಹಸ್ತಕ್ಷೇಪ ಮಾಡಲು ಕೇಂದ್ರ ಸರ್ಕಾರಕ್ಕೆ ಯಾವ ಹಕ್ಕಿದೆ ? ಇಂತಹ ಕ್ರಮಗಳು ಕೇಂದ್ರ-ರಾಜ್ಯ ಸಂಬಂಧಗಳ ಸುಧಾರಣೆಗೇನೂ ಸಹಾಯಕವಾಗುವದಿಲ್ಲ.

ಕಾಮ್ರೇಡ್ ಜ್ಯೋತಿ ಬಸುರವರು ಏನಾದರೂ ತಪ್ಪು ಮಾಡಿದ್ದರೆ ಅವರೊಂದಿಗೆ ಚರ್ಚಿಸಿ, ಇಲ್ಲಿ ತಪ್ಪಿದೆ ಎಂದು ತೋರಿಸಿಕೊಡಿ. ಮೊದಲು ನೀವದನ್ನು ದೃಢಪಡಿಸಿಕೊಳ್ಳಿ. ನಿಮಗೆ ಕೆಲವು ಪೋಲಿಸ್ ವರದಿಗಳು ಬರಬಹುದು. ಆ ಪೋಲಿಸ್ ವರದಿಗಳ ಮೇಲೆ ಅವಲಂಬಿಸುವುದು ಸರಿಯೇ ? ಚುನಾಯಿತ ಪ್ರತಿನಿಧಿಗಳ ನಡವಳಿಕೆಯನ್ನು ನಿರ್ಧರಿಸುವುದು ಪೋಲಿಸರೇ ? ಆದ್ದರಿಂದ ಈ ರೀತಿ ನಿರ್ಧರಿಸುವ ಕ್ರಮ ಸರಿಯಲ್ಲ.

ಆದ್ದರಿಂದ ಕೇಂದ್ರ-ರಾಜ್ಯ ಸಂಬಂಧದ ವಿಷಯ ಇಂದು ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಎಲ್ಲಾ ಮುಖ್ಯಮಂತ್ರಿಗಳಿಗೂ, ಹಿಂದೆ ಮುಖ್ಯಮಂತ್ರಿಗಳಾಗಿದ್ದವರಿಗೂ ಸಹ, ಈ ಸಮಸ್ಯೆಯ ಅರಿವಿದೆ. ಉದಾಹರಣೆಯಾಗಿ

ರಾಷ್ಟ್ರಪತಿ ಶ್ರೀ ಸಂಜೀವರೆಡ್ಡಿಯವರೂ ಸಹ ಬೆಂಬಲ ವ್ಯಕ್ತಪಡಿಸಿದ್ದಾರೆ. ಜನತಾ ಪಕ್ಷದ ಗುಜರಾತಿನ ಮುಖ್ಯಮಂತ್ರಿ ಶ್ರೀ ಭಾವುಬಾಯಿ ಪಟೇಲ್ ಸಹ ಚಂಡೀಘಡದಲ್ಲಿ ನಡೆಯುವ ಸಮ್ಮೇಳನದಲ್ಲಿ ಭಾಗವಹಿಸಲು ಸಮ್ಮತಿಸಿದ್ದಾರೆ.

ನೀವು ಅವರ ಮೇಲೆ ಪಕ್ಷದ ಶಿಸ್ತಿನ ಕ್ರಮ ಕೈಗೊಂಡು ಸಮ್ಮೇಳನದಲ್ಲಿ ಭಾಗವಹಿಸದಂತೆ ತಡೆಹಿಡಿಯಬಹುದು. ಆದರೆ ದೇಶದಲ್ಲಿ ಈ ಭಾವನೆ ಹೆಚ್ಚು ಹೆಚ್ಚು ಬೆಳೆಯುತ್ತಿದೆ. ಪ್ರತಿಯೊಬ್ಬ ಮುಖ್ಯಮಂತ್ರಿಯೂ ಸಹ ಕೇಂದ್ರಕ್ಕೆ ಭಿಕ್ಷಾಪಾತ್ರ ಹಿಡಿದು ಹೋಗಬೇಕಾದಾಗ ನಿಸ್ಸಹಾಯಕತೆಯನ್ನು ಅನುಭವಿಸುತ್ತಾರೆ. ಈ ಪರಿಸ್ಥಿತಿ ಮುಂದುವರಿಯಬೇಕೇ ?

ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧದ ಹೋರಾಟದಲ್ಲಿ ಸಾಧಿಸಿದ ದೇಶದ ಐಕ್ಯತೆಯನ್ನು ಧೃಡಪಡಿಸಬೇಕಾದಲ್ಲಿ ಈಗ ಹೊಸ ಆಧಾರವೊಂದನ್ನು ರೂಪಿಸಬೇಕು. ದೇಶದ ಅಭಿವೃದ್ಧಿಯಲ್ಲಿ ತಾವು ಸಮಾನಭಾಗಿಗಳೆಂದೂ, ಕೇಂದ್ರದ ಅಧೀನ ವಿಭಾಗ ಅಥವಾ ಸೇವಕರಲ್ಲವೆಂದೂ,ಅದಕ್ಕಾಗಿ ಸಂವಿಧಾನದಲ್ಲಿ ಸರಿಯಾದ ನಿಯಮಗಳನ್ನು ರಚಿಸಬೇಕೆಂದೂ, ಹೇಳುವ ರಾಜ್ಯಗಳ ಭಾವನೆಯ ಮೇಲೆಯೇ ಈ ಹೊಸ ಆಧಾರ ರೂಪುಗೊಳ್ಳಬೇಕು. ಆದ್ದರಿಂದ ರಾಷ್ಟ್ರಮಟ್ಟದ ಚರ್ಚೆ ಸಾಧ್ಯವಿಲ್ಲವೆನ್ನುವುದು ಸಮಸ್ಯೆಯಿಂದ ತಪ್ಪಿಸಿಕೊಳ್ಳುವಂತಹದಾಗಿದೆ.

ಮುರಾರ್ಜಿ ದೇಸಾಯಿಯವರು ಬಯಸಲಿ ಬಿಡಲಿ, ಜನತಾ ಪಕ್ಷ ಬಯಸಲಿ ಬಿಡಲಿ, ಈ ವಿಷಯದ ಬಗ್ಗೆ ರಾಷ್ಟ್ರಮಟ್ಟದ ಚರ್ಚೆ ನಡೆದೇ ನಡೆಯುತ್ತದೆ. ದೇಶದ ಜನತೆ ಈ ವಿಷಯದ ಬಗ್ಗೆ ಮಾತಾಡುವುದನ್ನು ತಡೆಹಿಡಿಯಲು ಯಾರಿಂದಲೂ ಸಾಧ್ಯವಿಲ್ಲ. ನಮಗೆ ದೇಶದ ಐಕ್ಯತೆಯಲ್ಲಿ ಆಸಕ್ತಿ ಇರುವುದರಿಂದ, ಈ ಸತ್ಯ ಜಯಹೊಂದೇ ಹೊಂದುತ್ತದೆ. ಶೋಷಕ ಶಕ್ತಿಗಳು ಶ್ರಮಜೀವಿ ವರ್ಗವನ್ನು ವಿಭಜಿಸುವ ಹಿತಾಸಕ್ತಿಗಳನ್ನು ಹೊಂದಿವೆ. ಶಿವಸೇನಾ ಮುಂತಾದ ಶಕ್ತಿಗಳು ಎಷ್ಟೋ ಸಲ, ಆಳುವ ಪಕ್ಷದಿಂದಲೇ ಸಹಾಯವನ್ನು ಪಡೆಯುತ್ತವೆ.

ಆದ್ದರಿಂದ ದೇಶದ ಐಕ್ಯತೆಯ ಹಿತಾಸಕ್ತಿಯಿಂದ ತಮ್ಮ ಹಳೆಯ ವಿಚಾರಗಳನ್ನು ಕೈಬಿಡಲು ಮುಕ್ತ ಮನಸ್ಸಿನಿಂದ ನಾನು ಭಾರತ ಸರ್ಕಾರವನ್ನು ಕೋರಿಕೊಳ್ಳುವೆ. 'ನಾನು ಜ್ಯೋತಿ ಬಸು ಹತ್ತಿರ ಮಾತಾಡುತ್ತೇನೆ' ಎಂದು ಪ್ರಧಾನಿ ಹೇಳದಿರಲಿ. ಇಡೀ ದೇಶದ ಜನತೆಯ ಸಮಸ್ಯೆಯಾಗಿರುವುದನ್ನು ಜ್ಯೋತಿ ಬಸು ಹತ್ತಿರ ಮಾತಾಡುವುದರಿಂದೇನು ಬಂತು ? ಆದ್ದರಿಂದ ಈ ವಿಷಯದ ಬಗ್ಗೆ ರಾಷ್ಟ್ರೀಯ ಚರ್ಚೆ ನಡೆಯಲೇಬೇಕು. ಹಾಗೂ ಮೂವತ್ತು ವರ್ಷಗಳಲ್ಲಿ ಈ ಸಂವಿಧಾನ ಹೇಗೆ ಕಾರ್ಯಾಚರಣೆಗೊಂಡಿದೆ ಎನ್ನುವುದನ್ನು ವಿಮರ್ಶಿಸಲೇಬೇಕು. ರಾಷ್ಟ್ರಮಟ್ಟದಲ್ಲಿ ಗಂಭೀರವಾಗಿ ಚರ್ಚಿಸಬೇಕಾದ ವಿಷಯವಿದು. ಆದ್ದರಿಂದ ಎಲ್ಲ ರಾಜ್ಯದ ಮಂತ್ರಿಗಳೂ ತಮ್ಮ ಪಕ್ಷದ ಕಟ್ಟು ಕಟ್ಟಳೆಗಳಿಂದ ಮುಕ್ತವಾಗಿರಬೇಕು.

ಕೊನೆಯದಾಗಿ, ಈ ರಾಜ್ಯಸ್ವಾಯತ್ತತೆಯನ್ನು ಕೇಳುವ ನಾವು ರಾಷ್ಟ್ರೀಯ ಚಳುವಳಿಯ ಉಜ್ವಲ ಪರಂಪರೆಯನ್ನು ಎತ್ತಿ ಹಿಡಿಯುತ್ತಿದ್ದೇವೆ. ರಾಷ್ಟ್ರೀಯ ಚಳುವಳಿಯು ಜನತೆಗೆ ಕೊಟ್ಟ ಭರವಸೆಗಳನ್ನು ಈಡೇರಿಸಬೇಕೆಂದು ನಾವು ಇಚ್ಛಿಸುತ್ತೇವೆ. ಇದನ್ನು ವಿರೋಧಿಸುವವರೆಲ್ಲರೂ ರಾಷ್ಟ್ರೀಯ ಚಳುವಳಿಯ ಉಜ್ವಲ ಪರಂಪರೆಗೆ ಮೋಸಬಗೆದು ವಿರೋಧಿಗಳಾಗುತ್ತಾರೆ.

---

# ಕಾರ್ಮಿಕ ವರ್ಗ
# ಮತ್ತು
# ಅಧಿಕಾರದ ವಿಕೇಂದ್ರೀಕರಣ

**—ಸನತ್ ಬೋಸ್**

ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಒಂದು ಆಂತರಿಕ ದ್ವಂದ್ವತೆ ಇದೆ. ಈ ರಾಜಕೀಯ ವ್ಯವಸ್ಥೆ, ರೂಪದಲ್ಲಿ ಮಾತ್ರ ಸಂಯುಕ್ತ ಸ್ವರೂಪ (federal) ದ ವ್ಯವಸ್ಥೆಯಂತಿದ್ದು, ಸತ್ವದಲ್ಲಿ ವಾಸ್ತವವಾಗಿ ಏಕಾತ್ಮಕ (unitary) ವಾಗಿದೆ. ಸಂವಿಧಾನವನ್ನು ಅಳವಡಿಸಿದ ನಂತರದ ವರ್ಷಗಳಿಂದಲೂ, ಈ ದ್ವಂದ್ವತೆಯ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಣಾಮಗಳು ಬದಲಾವಣೆಗೊಳ್ಳುತ್ತಾ ಬಂದಿವೆ. ಸ್ವಾತಂತ್ರ್ಯ ನಂತರ ಆಗಿನ ದಿನಗಳಲ್ಲಿ ಇರಿಸಿಕೊಂಡಿದ್ದ ನಂಬಿಕೆಗಳು, ಅವು ಎಷ್ಟೇ ಪವಿತ್ರವೆಂದು ಪರಿಗಣಿಸಲ್ಪಟ್ಟಿದ್ದರೂ ಸಹ, ತೀವ್ರತರ ಬದಲಾವಣೆಯಾಗುತ್ತಿರುವ ಪರಿಸ್ಥಿತಿಯಲ್ಲಿ ಕೆಲವು ನಂಬಿಕೆಗಳಿಗೇ ಕಟ್ಟಿ ಬೀಳುವುದು ಸಂಕುಚಿತ ಹಾಗೂ ಮೂರ್ಖತನವಾಗುತ್ತೆ.

೧೯೬೭ ರ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ಕೇಂದ್ರದಲ್ಲಿ ಅಧಿಕಾರಕ್ಕೆ ಬಂದು ಅನೇಕ ರಾಜ್ಯಗಳಲ್ಲಿ ಸೋಲಿಸಲ್ಪಟ್ಟಾಗ, ಮೇಲೆ ಹೇಳಿದಂತಹ ದ್ವಂದ್ವತೆಯು ಮೊಟ್ಟಮೊದಲ ಬಾರಿಗೆ ಸ್ಪಷ್ಟವಾಗಿ ಬೆಳಕಿಗೆ ಬಂದಿತು.

ಪ್ರಾದೇಶಿಕ ಅಸಮತೆಗೆ ಪ್ರತಿಯಾಗಿ ರಾಷ್ಟ್ರೀಯ ಆರ್ಥಿಕತೆಯ ಒಟ್ಟೊ ಬೆಳವಣಿಗೆಗಳ ಸಮಸ್ಯೆಗಳಿಗೆ ಸಂಬಂಧಿಸಿದಂತೆ, ಕೇಂದ್ರ–ರಾಜ್ಯ ಸಂಬಂಧಗಳಲ್ಲಿ (ಮೇಲೆ ಹೇಳಿದ ದ್ವಂದ್ವತೆಯ ಅತಿ ಮುಖ್ಯ ಸ್ವರೂಪದ) ಒಡಕಿನ ಅತಿ ಮುಖ್ಯ ಚಿಹ್ನೆಗಳು ಕಾಣಿಸಿಕೊಂಡವು.

ಕಳೆದ ಸಾರ್ವತ್ರಿಕ ಚುನಾವಣೆಗಳಿಂದ (೧೯೭೭), ಮುಖ್ಯವಾಗಿ ಪಶ್ಚಿಮ ಬಂಗಾಳದಲ್ಲಿ, ಈ ಸಮಸ್ಯೆ ಸಮರ್ಥನೀಯವಾಗಿ ಹೊಸ ಆಯಾಮ

ವನ್ನು ಪಡೆದಿದೆ. ಹೊಸದಾಗಿ ಚುನಾಯಿತಗೊಂಡ ಸರ್ಕಾರವು ಇಂದಿರುವ ಕೇಂದ್ರ-ರಾಜ್ಯ ಸಂಬಂಧಗಳಿಂದ ನಿರ್ಬಂದಿಸಲ್ಪಟ್ಟು, ಮೂಲಭೂತ ಸಾಮಾಜಿಕ-ಆರ್ಥಿಕ ಬದಲಾವಣೆಯು ದಾರಿಗೆ ಅಡ್ಡಿಯಾಗಿದೆಯೆಂದು ಭಾವಿಸುತ್ತದೆ. ಆದ್ದರಿಂದ ಈ ಸಮಸ್ಯೆಯ ಪರಿಹಾರಕ್ಕೆ ಜಾಗ್ರತೆಯಾಗಿ ಹೊಸ ದೃಷ್ಟಿಕೋನವನ್ನು ಅನ್ವಯಿಸುವುದು ಅವಶ್ಯಕವಾಗಿದೆ.

"ಬಲಿಷ್ಠ ಕೇಂದ್ರ ಮತ್ತು ನಿಶ್ಯಕ್ತ ರಾಜ್ಯಗಳು"; "ಬಲಿಷ್ಠ ರಾಜ್ಯಗಳು ಮತ್ತು ನಿಶ್ಯಕ್ತ ಕೇಂದ್ರ" ಹೀಗೆ ಎರಡೇ ಪರ್ಯಾಯಗಳಲ್ಲಿ ಕೇಂದ್ರ-ರಾಜ್ಯಗಳ ಸಂಬಂಧವನ್ನು ನಿರ್ಮಿಸುವುದು ಬೇಕಾಗಿಲ್ಲ. ಅಂತಹ ಅದೋ-ಇದೋ ಪರಿಹಾರಗಳು ಗೊಂದಲಗೊಂಡ, ಅಥವಾ ಪೂರ್ವೋದ್ದೇಶ ಪೀಡಿತ ಆಲೋಚನಾ ಕ್ರಮವನ್ನು ತೋರಿಸುತ್ತದೆ. ವಾಸ್ತವವಾಗಿ ಇವರೆಡನ್ನು ತಿರಸ್ಕರಿಸುವ ಮೂರನೇ ಪರ್ಯಾಯವೊಂದಿದೆ. ಒಂದು ನೈಜ ಸಂಯುಕ್ತ ಸ್ವರೂಪದ (federal) ವ್ಯವಸ್ಥೆಯಲ್ಲಿ ಏಕಕಾಲದಲ್ಲಿಯೇ ಕೇಂದ್ರ-ರಾಜ್ಯಗಳೆರಡೂ ಬಲಿಷ್ಠವಾಗಿದ್ದು, ಪ್ರಾದೇಶಿಕ ಅಥವಾ ಜನಾಂಗೀಯ ಅಸಮಾನತೆಯನ್ನುಂಟು ಮಾಡದೆ, ಸಮಗ್ರ ರಾಷ್ಟ್ರದ ಆರ್ಥಿಕತೆಯ ಆರೋಗ್ಯಕರ ಬೆಳವಣಿಗೆ ಸಾಧ್ಯವಾಗುತ್ತದೆ. ಅಂತಹ ವ್ಯವಸ್ಥೆಯಲ್ಲಿ ಮಾತ್ರ ನಮ್ಮ ದೇಶದ ಬಹುಸಂಖ್ಯಾತ ಬಡಜನತೆಗೆ ರಾಷ್ಟ್ರೀಯ ಯೋಜನೆಗಳು ಅರ್ಥಪೂರ್ಣವಾಗಲು ಸಾಧ್ಯ.

"ಬಲಿಷ್ಠ ಕೇಂದ್ರದ ಜೊತೆಗೇ ಬಲಿಷ್ಠ ರಾಜ್ಯ" ಎನ್ನುವ ಘೋಷಣೆ ಆದರ್ಶಪ್ರಾಯದ ಕಾಲ್ಪನಿಕ ಯೋಚನೆಗಳಿಂದೇನೂ ಹುಟ್ಟಿಕೊಂಡದ್ದಲ್ಲ. ಬದಲು ಇಂದಿನ ವಾಸ್ತವಿಕತೆಯ ತುರ್ತು ಅವಶ್ಯಕತೆಯಿಂದ ಬಂದಿರುವುದಾಗಿದೆ. ಈ ಗುರಿ ಸಾಧಿಸುವ ದೃಷ್ಟಿಯಿಂದ ಎಲ್ಲಾ ಆವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕು.

ಈ ಉದ್ದೇಶದ ಸಾಧನೆಗಾಗಿ ನಾವು ನಿರ್ವಹಿಸಬೇಕಾದ ಕರ್ತವ್ಯಗಳೆಂದರೆ, ಸಮಾಜದ ವಿವಿಧ ಭಾಗದ ಜನರಲ್ಲಿ ಈ ಘೋಷಣೆಯ ಮಹತ್ವ, ಪ್ರಾಮುಖ್ಯತೆಯನ್ನು ಪ್ರಚಾರಪಡಿಸುವುದು. ಈ ಸಮಸ್ಯೆ ಇಡೀ ಸಮಾಜದ ಹಿತಾಸಕ್ತಿಗೇ ವಿರೋಧವಾಗಿದೆ. (ಕೈಗಾರಿಕೋದ್ಯಮಿಗಳಿಗೂ ಸಹ ಇದು ಸಮಸ್ಯೆಯಾಗಿದೆ. ಅವರೂ ಸಹ- ಬೇರೆ ಬೇರೆ ಕಾರಣಗಳಿಗಾಗಿದ್ದರೂ-ಕಾಲ

ಕಾಲಕ್ಕೆ ಈಗಿನ ಕೇಂದ್ರ-ರಾಜ್ಯ ಸಂಬಂಧದ ಬಗ್ಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸುತ್ತಾರೆ.)

ಈ ಸಮಸ್ಯೆಯಿಂದ ಹೆಚ್ಚು ತೊಂದರೆಗೊಳಗಾದವರೆಂದರೆ, ಕಾರ್ಮಿಕ ವರ್ಗ. ಕಾರ್ಮಿಕವರ್ಗ ತನ್ನ ದಿನ ನಿತ್ಯದ ಆರ್ಥಿಕ ಸಮಸ್ಯೆಗಳ ಬಗ್ಗೆ ಪ್ರಜ್ಞಾವಂತವಾಗಿರಬಹುದು. ಆದರೆ ಈ ಆರ್ಥಿಕ ಸಮಸ್ಯೆಗಳು ಹೇಗೆ ಕೇಂದ್ರ-ರಾಜ್ಯ ಸಂಬಂಧಗಳಿಗೆ ಸಂಬಂಧಿಸಿವೆ ಎನ್ನುವ ಪ್ರಜ್ಞೆಯಿದೆ ಎಂದು ಹೇಳಲಾಗುವದಿಲ್ಲ. ಸಧ್ಯದ ಕೇಂದ್ರ-ರಾಜ್ಯ ಸಂಬಂಧಗಳನ್ನು ಬದಲಾಯಿಸದಹೊರತು ಬಗೆಹರಿಸಲಾಗದ ಕಾರ್ಮಿಕವರ್ಗದ ಮುಖ್ಯ ಸಮಸ್ಯೆಗಳಿಗೆ ಇಲ್ಲಿ ಹೆಚ್ಚು ಗಮನ ಕೊಡೋಣ. ತನ್ನೆಲ್ಲಾ ಕುಂದುಕೊರತೆಗಳು ಅಥವಾ ಬೇಡಿಕೆಗಳು ಮಾಲಕರ ನಿಶ್ಕಾಳಜಿಯಿಂದಷ್ಟೇ ಹುಟ್ಟಿಕೊಂಡಿರುವುದೆಂದೂ ಹಾಗೂ ತಮ್ಮ ಹೋರಾಟಗಳೆಲ್ಲಾ ಮಾಲಕರ ವಿರುದ್ಧ ಮಾತ್ರವೇ ನಡೆಸಬೇಕೆಂದೂ ಕಾರ್ಮಿಕವರ್ಗ ತಿಳಿಯುವುದು ತಪ್ಪಾಗುತ್ತದೆ.

ಅಂದರೆ ಕಾರ್ಮಿಕವರ್ಗದ ಮಾಲಕರ ವಿರುದ್ಧದ ಆರ್ಥಿಕ ಹೋರಾಟಗಳು ಪ್ರಾಮುಖ್ಯವಲ್ಲವೆಂದೇನೂ ಇದರರ್ಥವಲ್ಲ.ಮುಖ್ಯವಾದ ಅಂಶವೆಂದರೆ ಕಾರ್ಮಿಕರ ಪ್ರಜ್ಞೆಯ ಮಟ್ಟವನ್ನು ಎತ್ತರಿಸುವುದು. ಭವಿಷ್ಯದ ಹೊಸ ವ್ಯವಸ್ಥೆಯನ್ನು ನಿರ್ಮಿಸುವ ಹೋರಾಟದಲ್ಲಿ ಇಡೀ ಸಮಾಜದ ಮೇಲೆಯೇ ತನ್ನ ಮುಖಂಡತ್ವ (hegemony) ವನ್ನು ಸ್ಥಾಪಿಸಲು ಕಾರ್ಮಿಕ ವರ್ಗ ಇಡೀ ರಾಜಕೀಯ ಅರ್ಥಶಾಸ್ತ್ರದ (Political Economy) ಪೂರ್ಣ ವ್ಯಾಪ್ತಿಯ ಬಗೆಗೇ ಪ್ರಜ್ಞೆ ಹೊಂದಿರಬೇಕು.

ನಿಸ್ಸಂಶಯವಾಗಿ ಇದು ಕಷ್ಟಕರವಾದ ಕೆಲಸ. ಆದರೆ ಇಡೀ ದೇಶದ ಭವಿಷ್ಯದ ಶ್ರೇಯಸ್ಸಿಗಾಗಿ ಇದನ್ನು ಮಾಡಲೇಬೇಕು. ಕೆಲವು ತಾತ್ಕಾಲಿಕ ಪರಿಹಾರಗಳು ಸಿಕ್ಕಿದರೂ, ಸಂಕುಚಿತ ಉದ್ದೇಶದ ದೃಷ್ಟಿಕೋನವು ದೀರ್ಘಾವಧಿಯ ದೃಷ್ಟಿಯಿಂದ ಅಪಾಯಕಾರಿಯಾದುದು. ಒಂದು ಕೈಗಾರಿಕೆಯಲ್ಲಿ ಕಾರ್ಮಿಕರನ್ನು ಕೆಲಸದಿಂದ ಕಿತ್ತು ಹಾಕಿದರೆ ಆ ಕಾರ್ಖಾನೆಯ ಕಾರ್ಮಿಕರು ಮಾತ್ರ ತೊಂದರೆಗೊಳಗಾಗಬಹುದು. ಆದರೂ ಆಳವಾಗಿ ವಿಶ್ಲೇಷಿಸಿದಾಗ ಪ್ರಾರಂಭದಲ್ಲಿ ಅಪ್ರತ್ಯಕ್ಷವಾಗಿಯೂ, ನಂತರ ನೇರವಾಗಿಯೂ,

ಅದು ಇಡೀ ರಾಜ್ಯವನ್ನು ಆವರಿಸಿದ ಬೃಹತ್ ಸಮಸ್ಯೆಯ ಒಂದು ಭಾಗವೆಂದು ತಿಳಿಯಬಹುದು.

ಇದು ಪಶ್ಚಿಮ ಬಂಗಾಳದ 'ಇಂದಿನ ರಾಜಕೀಯ, ಆರ್ಥಿಕ ಪರಿಸ್ಥಿತಿಯ ವಾಸ್ತವಾಂಶವಾಗಿದೆ. ಪಶ್ಚಿಮ ಬಂಗಾಳ, ಕೈಗಾರಿಕಾ ಶಿಥಿಲತೆಯ ಹಂತವನ್ನು ತಲುಪಿದೆ. ಹೊಸ ಕೈಗಾರಿಕಾ ಚಟುವಟಿಕೆಗಳ ಲಕ್ಷಣಗಳಿಲ್ಲದಿರುವುದು ಮಾತ್ರವಲ್ಲದೆ, ಸಧ್ಯದಲ್ಲಿ ಅಸ್ತಿತ್ವದಲ್ಲಿರುವ ಕೈಗಾರಿಕೆಗಳೂ ಸಹ ತೀವ್ರತರ ಬಿಕ್ಕಟ್ಟಿಗೊಳಗಾಗಿವೆ. ಸಧ್ಯದ ಭವಿಷತ್ತಿನಲ್ಲಿ ಈ ಬಿಕ್ಕಟ್ಟುಗಳು ಬಗೆಹರಿಯಲ್ಪಡುವ ಸೂಚನೆಗಳು ಸಹ ಕಾಣುತ್ತಿಲ್ಲ. ಬಹಳ ಕಾಲದಿಂದಲೂ ಈ ಬಿಕ್ಕಟ್ಟುಗಳು ಇದ್ದ ಹಾಗೇ ಇವೆ.

ಕಾರ್ಖಾನೆಗಳನ್ನು ಮುಚ್ಚುವಿಕೆ, ಹೊರಗೀಲಿ, ಅಳಿಪಾಳಿ (lay-off), ಇವು ಪಶ್ಚಿಮ ಬಂಗಾಳದ ಕೈಗಾರಿಕಾ ವ್ಯವಸ್ಥೆಯಲ್ಲಿ ಸಾಧಾರಣ ಅಂಶಗಳಾಗಿಬಿಟ್ಟಿವೆ. ಕೈಗಾರಿಕೆಗಳ ಕುಸಿತ ಮಾರುಕಟ್ಟೆಯ ಮಿತಿಯೊಳಗೇ ನಿರ್ವಹಿಸಬೇಕಾಗಿ ಒಂದು, ಅದರಿಂದ ಉತ್ಪಾದನಾ ಕುಸಿತ, ಬೆಲೆ ಏರಿಕೆ, ನಿರುದ್ಯೋಗ ಸಮಸ್ಯೆಗಳು ಉಂಟಾಗಿವೆ.

ಕೆಲವು ಕೈಗಾರಿಕೆಗಳಲ್ಲಷ್ಟೇ ಶುರುವಾದ ಈ ರೋಗ, ಇಂದು ಆ ಘಟಕಗಳಿಗಷ್ಟೇ ಸೀಮಿತವಾಗಿಲ್ಲ. ಎಲ್ಲಾ ಕೈಗಾರಿಕೆಗಳನ್ನೂ ಒಳಗೊಂಡು, ಇಡೀ ಕೈಗಾರಿಕಾ ಜೀವನವನ್ನೇ ಆವರಿಸಿಕೊಂಡು ಬಿಟ್ಟಿದೆ. ಇದು ಮತ್ತೆ ಪರೋಕ್ಷವಾಗಿಯೂ, ನೇರವಾಗಿಯೂ, ಹಳ್ಳಿಯ ವಿಭಾಗದ ಮೇಲೂ ಪರಿಣಾಮ ಬೀರುತ್ತಿದೆ. ಹಳ್ಳಿಯಲ್ಲಿನ ಸಣಬು ಬೆಳೆಗಾರನ ಸಮಸ್ಯೆಗಳು ಸಣಬಿನ ಕೈಗಾರಿಕಾ ಕಾರ್ಮಿಕರ ಸಮಸ್ಯೆಗಳಿಗೆ ಪೂರ್ತಿಯಾಗಿ ಸಂಬಂಧ ಸ್ಥಾಪಿಸಲ್ಪಟ್ಟಿದೆ. ಕೈಗಾರಿಕೆಗಳನ್ನು ಮುಚ್ಚುವುದೂ, ಬೀಗ ಹಾಕುವುದೂ, ಕಾರ್ಮಿಕರನ್ನು ವಜಾಮಾಡುವುದೂ ಮುಂತಾದ ಸಮಸ್ಯೆಗಳಿಗೆ ರಾಜ್ಯ ಸರಕಾರ ಅಸಹಾಯಕವಾಗಿ ಬಿಟ್ಟಿದೆ ಹೆಚ್ಚೆಂದರೆ ಅದು ಸಲಹೆ ಸೂಚನೆಗಳನ್ನು ನೀಡುತ್ತಾ ಹೋಗಬಹುದು. ಆದರೆ ಅವುಗಳನ್ನು ಕಾರ್ಯರೂಪಕ್ಕಿಳಿಸಲು ಅಧಿಕಾರವಿಲ್ಲ. ಕೆಳಗಿನ ಉದಾಹರಣೆಗಳು ಮೇಲೆ ಹೇಳಿದ ಅಭಿಪ್ರಾಯಗಳನ್ನು ವಿವರಿಸುತ್ತವೆ.

೧. ೧೯೬೯ ರಲ್ಲಿ ಆಗಿನ ರಾಜ್ಯ ಸರಕಾರ ಟ್ರೇಡ್ ಯೂನಿಯನ್ ಚಟುವಟಿಕೆಗಳು ಆರೋಗ್ಯಕರವಾಗಿ ನಿರ್ವಹಿಸಲ್ಪಡಲು, ಟ್ರೇಡ್‌ಯೂನಿಯನ್ ಕಾಯ್ದೆಯನ್ನು ಸೂಕ್ತವಾಗಿ ತಿದ್ದುಪಡಿಮಾಡಲು ಇಚ್ಛಿಸಿತು. ಈ ಉದ್ದೇಶಕ್ಕಾಗಿ, ಗುಪ್ತಮತದಾನ ಪದ್ಧತಿಯಿಂದ ಟ್ರೇಡ್ ಯೂನಿಯನ್‌ಗಳನ್ನು ಕಡ್ಡಾಯವಾಗಿ ಮಾನ್ಯಮಾಡುವಂತೆ, "ಟ್ರೇಡ್‌ಯೂನಿಯನ್ (ಪಶ್ಚಿಮ ಬಂಗಾಳ ತಿದ್ದುಪಡಿ) ಕಾಯ್ದೆ" ಯನ್ನು ಪಾಸು ಮಾಡಲಾಯಿತು. ಆದರೆ ಕೇಂದ್ರ ಸರಕಾರದಿಂದ ಈ ಶಾಸನದ ಜಾರಿಯು ತಡೆಹಿಡಿಯಲ್ಪಟ್ಟಿತು! ಕಾರ್ಮಿಕರ ಹಿತಾಸಕ್ತಿಯ ರಕ್ಷಣೆಗಾಗಿ ರಾಜ್ಯ ವಿಧಾನಸಭೆಯು ಕಾಯ್ದೆಯನ್ನು ರಚಿಸಬಹುದು. ಆದರೆ ಕಾಯ್ದೆಯನ್ನು ಜಾರಿಗೆ ತರುವ ಅಂತಿಮ ಅಧಿಕಾರ ಕೇಂದ್ರಕ್ಕೆ ಮಾತ್ರ ಇದೆ. (ಸಂವಿಧಾನದ ರಾಜ್ಯಪಟ್ಟಿ ಹಾಗೂ ಸಂಗತ ಪಟ್ಟಿಗಳೆರಡರ ವಿಷಯಗಳಿಗೂ ಸಹ) ಕಾರ್ಮಿಕರ ಪರವಾದ ಹೊಸ ಕಾನೂನುಗಳನ್ನು ಜಾರಿಗೊಳಿಸಲು ರಾಜ್ಯ ಸರಕಾರಕ್ಕೆ ಯಾವ ಅಧಿಕಾರವೂ ಇಲ್ಲ.

೨. ಮುಚ್ಚಲ್ಪಟ್ಟ ಕಾರ್ಖಾನೆಗಳನ್ನು ಪುನ: ತೆರೆಯಲು ಸಂಪನ್ಮೂಲಗಳ ಕೊರತೆಯಿರುವುದಷ್ಟೇಯಲ್ಲದೆ, ಕೇಂದ್ರದ ಅಪ್ಪಣೆಯಿಲ್ಲದೆ ರಾಜ್ಯ ಸರ್ಕಾರ ಈ ಕಾರ್ಯವನ್ನು ನೆರವೇರಿಸುವ ಹಾಗಿಲ್ಲ. ಆ ಕಾರಣದಿಂದಲೇ ಮುಚ್ಚಲ್ಪಟ್ಟ ಕಾರ್ಖಾನೆಗಳಲ್ಲಿ ಮೊದಲು ಉದ್ಯೋಗಿಗಳಾಗಿದ್ದ ಕಾರ್ಮಿಕರು ಈಗ ನಿರುದ್ಯೋಗಿಗಳಾಗಿಯೇ ಉಳಿಯಬೇಕಾಗಿದೆ.

೩. ಹೊಸ ಕೈಗಾರಿಕೆಯನ್ನು ಸ್ಥಾಪಿಸಲು ಅನುಮತಿ ನೀಡುವ ಅಧಿಕಾರ ಕೇಂದ್ರಕ್ಕೆ ಮಾತ್ರ ಇರುವುದರಿಂದಲೂ ಹಾಗೂ ಕೇಂದ್ರವೇ ಹಣಕಾಸನ್ನೂ, ಕಚ್ಚಾ ಪದಾರ್ಥಗಳ ಸರಬರಾಜನ್ನೂ, ವಿದೇಶಿ ವಿನಿಮಯವನ್ನೂ ಹತೋಟಿಯಲ್ಲಿಟ್ಟುಕೊಂಡಿರುವುದರಿಂದಲೂ,ಕೈಗಾರಿಕೀಕರಣವನ್ನು ಪ್ರೋತ್ಸಾಹಿಸುವ ಯಾವ ಕ್ರಮಗಳನ್ನೂ ರಾಜ್ಯಸರ್ಕಾರ ತೆಗೆದುಕೊಳ್ಳಲು ಸಾಧ್ಯವಿಲ್ಲ.ಆದ್ದರಿಂದ ಕೈಗಾರಿಕಾ ಹಾಗೂ ನಗರ ನಿರುದ್ಯೋಗ ಸಮಸ್ಯೆ ಉಲ್ಬಣಿಸಿ ಅದರಿಂದ ನೂರಾರು ಸಮಸ್ಯೆಗಳು ತಲೆದೋರಿದ್ದರೂ, ಪರಿಹಾರ ಕ್ರಮಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತಿಲ್ಲ.

೬. ಸಂವಿಧಾನದ ನಿರ್ದೇಶಕ ತತ್ವಗಳ ಪ್ರಕಾರ ಎಲ್ಲಾ ಕಲ್ಯಾಣ ಕಾರ್ಯಗಳನ್ನು ರಾಜ್ಯ ಸರ್ಕಾರವೇ ನಿರ್ವಹಿಸಬೇಕಾಗಿದ್ದರೂ, ಇದಕ್ಕಾಗಿಯೇ ಇರುವ ಹಣಕಾಸು ಹಾಗೂ ಇತರೆ ಸಂಪನ್ಮೂಲಗಳು, ಪೂರ್ತಿಯಾಗಿ ಕೇಂದ್ರದ ಹತೋಟಿಗೆ ಒಳಪಟ್ಟಿವೆ.

೭. ಕೊನೆಯದಾಗಿ, ಯಾವುದೇ ರಾಜ್ಯ ಶಾಸನ ಸಭೆಗಳನ್ನು ಯಾವಾಗಬೇಕಾದರೂ ಉರುಳಿಸಲು ಸಂವಿಧಾನವು ಕೇಂದ್ರಕ್ಕೆ ಅಧಿಕಾರವನ್ನು ನೀಡಿದೆ. ಆ ಕಾರಣ ಒಂದು ರಾಜ್ಯ ಸರ್ಕಾರದ ಆಡಳಿತದ ಮೂಲಭೂತ ತತ್ವಗಳು ಕೇಂದ್ರಕ್ಕೆ ವಿರೋಧವಾದಾಗ, ಕೇಂದ್ರವು ರಾಜ್ಯ ಸರ್ಕಾರವನ್ನು ಸ್ಥಾನ ಚ್ಯುತಿಗೊಳಿಸಬಹುದು. ಆದ್ದರಿಂದ ಕೇಂದ್ರದ ಕೋಪಕ್ಕೆ ಗುರಿಯಾಗಿ, ದಬ್ಬಾಳಿಕೆಯನ್ನು ಎದುರಿಸುವುದಕ್ಕಿಂತ ರಾಜ್ಯಗಳು ಕೇಂದ್ರದ ನಿರ್ದೇಶನಗಳನ್ನು (ಆ ನಿರ್ದೇಶನದ ವರ್ಗಗುಣಗಳೇನೇ ಇದ್ದರೂ) ಅಳವಡಿಸಬೇಕಾಗುತ್ತದೆ.

ಇಂದಿನ ಕೇಂದ್ರ ಸರ್ಕಾರದ (ಹಾಗೂ ಪಶ್ಚಿಮ ಬಂಗಾಳ ಸರ್ಕಾರದ್ದೂ ಸಹ) ವರ್ಗ ಗುಣಗಳನ್ನು ಚರ್ಚಿಸುವುದು ಈ ಲೇಖನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಒಂದು ಮಾತು ಮಾತ್ರ ಸ್ಪಷ್ಟವಾಗಿ ಹೇಳಬಹುದು. ಸಧ್ಯದ ಕೇಂದ್ರ-ರಾಜ್ಯ ಸಂಬಂಧವನ್ನು ಅಧಿಕಾರ ವಿಕೇಂದ್ರೀಕರಣಗೊಳ್ಳುವ ಹಾಗೆ ಬದಲಿಸುವುದರಿಂದ ರಾಜ್ಯದ ಶ್ರಮಿಕ ವರ್ಗದ ಜೀವನದ ಸಮಸ್ಯೆಗಳ ಪರಿಹಾರಕ್ಕೆ, ರಾಜ್ಯಸರ್ಕಾರಗಳು ಪ್ರಗತಿಪರ ನೀತಿಯನ್ನು ಅಳವಡಿಸಲು ಸಾಧ್ಯವಾಗುತ್ತದೆ.

[ಈ ಲೇಖನವನ್ನು ಬರೆಯಲು ಪಶ್ಚಿಮ ಬಂಗಾಳದ ಸಿ. ಐ. ಟಿ. ಯು. ವಿನ ಶ್ರೀ ಮನೋರಂಜನ್ ರೇ, ಮತ್ತು ಶ್ರೀ ಶಾಂತಿ ಬೋಸ್ ರವರ ಸಹಾಯವನ್ನು ಲೇಖಕರು ನೆನೆಯುತ್ತಾರೆ.]

[‘ಮೈನ್ ಸ್ಟ್ರೀಮ್’ ಸಂಚಿಕೆಯಿಂದ]

## ಕೋಷ್ಟಕ ೧

### ದೇಶದ ಒಟ್ಟು ತೆರಿಗೆ ಆದಾಯವು ಕೇಂದ್ರ ಮತ್ತು ಎಲ್ಲಾ ರಾಜ್ಯಗಳಿಗೂ ಒಟ್ಟು ಸಂದಾಯವಾಗುವ ಪ್ರಮಾಣ [ಕೋಟಿ ರೂ. ಗಳಲ್ಲಿ]

| ವರ್ಷ | ಒಟ್ಟು ಕೇಂದ್ರದ ತೆರಿಗೆ ಆದಾಯ | ಎಲ್ಲಾ ರಾಜ್ಯಗಳಿಗೂ ಒಟ್ಟು ಸಂದಾಯವಾಗುವುದು. | ಉಳಿದ ಕೇಂದ್ರದ ಭಾಗ | ಎಲ್ಲಾ ರಾಜ್ಯಗಳಿಗೆ ಒಟ್ಟು ಸಲ್ಲುವ ಶೇ ಪ್ರಮಾಣ |
|---|---|---|---|---|
| 1969-70 | .... 2823 | .... 622 | .... 2201 | .... 22.0 |
| 70-71 | .... 3207 | .... 755 | .... 2452 | .... 23.5 |
| 71-72 | .... 3872 | .... 944 | .... 2928 | .... 24.4 |
| 72-73 | .... 4510 | .... 1067 | .... 3443 | .... 23.7 |
| 73-74 | .... 5073 | .... 1174 | .... 3900 | .... 23.1 |
| 74-75 | .... 6322 | .... 1224 | .... 5098 | .... 19.4 |
| 75-76 | .... 7609 | .... 1599 | .... 6010 | .... 21.0 |
| 76-77 | .... 8271 | .... 1690 | .... 6581 | .... 20.4 |
| 77-78 | .... 8906 | .... 1799 | .... 7107 | .... 20.2 |
| 78-79* | .... 10053 | .... 2025 | .... 8028 | .... 20.1 |

*(ಬಜೆಟ್ ಅಂದಾಜು)

ಮೂಲ : 'ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ಎಪ್ರಿಲ್ ೮, ೧೯೭೮'

ಭಾರತದ ಸಂವಿಧಾನವು ರೂಪದಲ್ಲಿ ಮಾತ್ರ ಸಂಯುಕ್ತ ಸ್ವರೂಪ (federal) ದ್ದಾಗಿದ್ದು, ಸತ್ವದಲ್ಲಿ ಏಕಾತ್ಮಕ (unitary) ವಾಗಿದೆ ಎನ್ನುವುದನ್ನು ಮೇಲಿನಕೋಷ್ಟಕದಲ್ಲಿ ಕೊಟ್ಟಿರುವ ಅಂಕಿ ಸಂಖ್ಯೆಗಳೇ ಸಿದ್ಧಪಡಿಸುತ್ತವೆ. ಕೇಂದ್ರದ ತೆರಿಗೆ ಆದಾಯದಲ್ಲಿ ಸುಮಾರು ಶೇಕಡಾ ೨೦ ಭಾಗ ಮಾತ್ರ ಎಲ್ಲಾ ರಾಜ್ಯಗಳಿಗೆ ಸಲ್ಲುವಾಗ, ಪ್ರತಿ ರಾಜ್ಯಗಳಿಗೂ ಶೇ. ೧ ಕ್ಕಿಂತ ಕಡಿಮೆ

ಭಾಗಸಂದಾಯವಾಗುತ್ತದೆ. ಉಳಿದ ಸುಮಾರು ಶೇ. ೮೦ ಭಾಗ ಕೇಂದ್ರ ಸರ್ಕಾರವೇ ಖರ್ಚು ಮಾಡುತ್ತದೆ. ಈ ಶೇ ೧೮ ಭಾಗದಿಂದ ರಾಜ್ಯಗಳು ಹೇಗೆ ತಮ್ಮ ಆರ್ಥಿಕ, ಸಾಮಾಜಿಕ, ಬೆಳವಣಿಗೆಯನ್ನು ಸಾಧಿಸಲು ಸಾಧ್ಯ? ಶೇ ೮೦ ಕೇಂದ್ರಕ್ಕೂ, ಶೇ. ೧ ಭಾಗ ರಾಜ್ಯಕ್ಕೂ ಎಂದರೆ, ಇವೇನು ರಾಜ್ಯಗಳೋ ಅಥವಾ ಕೇಂದ್ರದ ಅಧೀನದಲ್ಲಿರುವ ಮುನ್ಸಿಪಾಲಿಟಿಗಳೋ? ಜನತಾಪಕ್ಷ ಅಧಿಕಾರಕ್ಕೆ ಬಂದ ಮೇಲೂ ಇದೇ ಗತಿ ಮುಂದುವರಿದಿದೆ. (ಮೇಲೆ ೭೭-೭೮, ೭೮-೭೯ ವರ್ಷ ನೋಡಿ)

ರಾಜ್ಯಗಳ ತಿರುಪೆ ಸ್ಥಿತಿಯನ್ನು ಹೋಗಲಾಡಿಸಲು ಪಶ್ಚಿಮ ಬಂಗಾಳದ ಎಡರಂಗ ಸರಕಾರವು ಕೇಂದ್ರಕ್ಕೆ ಸಲ್ಲಿಸಿದ ಮನವಿಯಲ್ಲಿ ಕೇಂದ್ರದ ಒಟ್ಟು ಆದಾಯದ ಶೇ. ೭೫ ಭಾಗವನ್ನು ವಿವಿಧ ರಾಜ್ಯಗಳಿಗೆ ಹಂಚಲ್ಪಡಬೇಕೆಂದೂ, ಉಳಿದ ಶೇ. ೨೫ ಮಾತ್ರ ಕೇಂದ್ರ ಸರಕಾರಕ್ಕಿರಬೇಕೆಂದೂ ಹೇಳಿದೆ.

## ಕೋಷ್ಟಕ ೨

**ಕೇಂದ್ರದ ಆದಾಯ ವಿತರಣೆಯಲ್ಲಿ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಲ್ಲುವ ಪ್ರಮಾಣ (ಕೋಟಿ ರೂ. ಗಳಲ್ಲಿ)**

| | ಒಟ್ಟು ಅಭಿವೃದ್ಧಿ + ಅನಭಿವೃದ್ಧಿ ಕಾರ್ಯಗಳಿಗಾಗಿ ವಿತರಣೆ | ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಒಟ್ಟು ಧನ ಸಹಾಯ + ಸಾಲ, ಮುಂಗಡವಾಗಿ ಸಂದಾಯವಾಗುವುದು. | ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂದಾಯವಾಗುವ ಶೇಕಡಾ ಪ್ರಮಾಣ |
|---|---|---|---|
| 1974-75 | .... 10052 | .... 2153 | .... 21·41% |
| 75-76 | .... 12591 | .... 2584 | .... 20·52% |
| 76-77 | .... 13808 | .... 3103 | .... 22·47% |
| 77-78 | .... 16345 | .... 4052 | .... 24·79% |
| 78-79* | .... 18416 | .... 5013 | .... 27·22% |

*(ಬಜೆಟ್ ಅಂದಾಜು)

ಆಧಾರ : 'ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ' ಏಪ್ರಿಲ್ 22, 1978

## ಕೋಷ್ಟಕ ೩

### ಕೇಂದ್ರದ ಅಭಿವೃದ್ಧಿ ಕಾರ್ಯಗಳಿಗೆ (development expenditure) ಆದಾಯದ ವಿತರಣೆಯಲ್ಲಿ ರಾಜ್ಯಗಳಿಗೆ ಸಂದಾಯವಾಗುವ ಪ್ರಮಾಣ (ಕೋಟಿ ರೂ. ಗಳಲ್ಲಿ)

| | ಒಟ್ಟು ಅಭಿವೃದ್ಧಿ ಕಾರ್ಯಗಳಿಗಾಗಿ ವಿತರಣೆ | ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಧನಸಹಾಯ | ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಾಲ ಮತ್ತು ಮುಂಗಡ | ಒಟ್ಟು ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂದಾಯ | ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂದಾಯವಾಗುವ ಶೇಕಡಾ ಪ್ರಮಾಣ |
|---|---|---|---|---|---|
| 1969-70 | 1319 | 352 | — | — | — |
| 70 71 | 1481 | 386 | — | — | — |
| 71-72 | 2314 | 681 | — | — | — |
| 72-73 | 2371 | 694 | — | — | — |
| 73-74 | 4347 | 642 | — | — | — |
| 74-75 | 5687 | 532 | 943 | 1585 | 36.46% |
| 75 76 | 6982 | 641 | 1041 | 1573 | 27 65% |
| 76-77 | 8083 | 1053 | 1211 | 1852 | 26.52% |
| 77-78 | 9946 | 1379 | 1353 | 2406 | 29.76% |
| 78 79* | 11037 | 1750 | 1820 | 3199 | 32 16% |
| | | | 2218 | 3968 | 35 95 % |

ಆಧಾರ : 'ಎಕನಾಮಿಕ್ ಆ್ಯಂಡ ಪೊಲಿಟಿಕಲ್ ವೀಕ್ಲಿ,' ಏಪ್ರಿಲ್ ೨೨, ೧೯೭೮.

*[ಬಜೆಟ್ ಅಂದಾಜು]

## ಕೋಷ್ಟಕ ೪

### ಕೇಂದ್ರದ ಅನಭಿವೃದ್ಧಿ ಕಾರ್ಯಗಳಿಗೆ (non-development expenditure) ಆದಾಯದ ವಿತರಣೆಯಲ್ಲಿ ರಾಜ್ಯಗಳಿಗೆ ಸಂದಾಯವಾಗುವ ಪ್ರಮಾಣ (ಕೋಟಿ ರೂ. ಗಳಲ್ಲಿ)

| | ಒಟ್ಟು ಅನಭಿವೃದ್ಧಿ ಕಾರ್ಯಗಳಿಗಾಗಿ ವಿತರಣೆ | ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಧನ ಸಹಾಯ | ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಾಲ ಮತ್ತು ಮುಂಗಡ | ಒಟ್ಟು ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂದಾಯ | ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂದಾಯವಾಗುವ ಶೇಕಡಾ ಪ್ರಮಾಣ |
|---|---|---|---|---|---|
| 1969-70 | 2271 | 236 | — | — | — |
| 70-71 | 2643 | 226 | — | — | — |
| 71-72 | 2931 | 209 | — | — | — |
| 72-73 | 3126 | 252 | — | — | — |
| 73-74 | 3930 | 310 | — | — | — |
| 74-75 | 4365 | 528 | 52 | 580 | 13.28% |
| 75-76 | 5609 | 648 | 84 | 732 | 13.05% |
| 76-77 | 5725 | 569 | 128 | 697 | 12.17% |
| 77-78 | 6399 | 653 | 200 | 853 | 13.33% |
| 78-79* | 7379 | 743 | 302 | 1045 | 14.16% |

ಆಧಾರ : 'ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,' ಏಪ್ರಿಲ್ ೨೨, ೧೯೭೮.

* ಬಜೆಟ್ ಅಂದಾಜು]

## ಕೋಷ್ಟಕ ೫

ವಿವಿಧ ರಾಜ್ಯ ಸರಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಕೇಂದ್ರಕ್ಕೆ ಕೊಡಬೇಕಾಗಿದ್ದ ಸಾಲದ ಪ್ರಮಾಣ (ಮಾರ್ಚ ೩೧, ೧೯೭೭ ರಂದು)
(ಕೋಟಿ ರೂ. ಗಳಲ್ಲಿ)

| ರಾಜ್ಯಗಳು | ಕೇಂದ್ರಕ್ಕೆ ಕೊಡಬೇಕಾದ ಸಾಲ | ರಾಜ್ಯಗಳು | ಕೇಂದ್ರಕ್ಕೆ ಕೊಡಬೇಕಾದ ಸಾಲ |
|---|---|---|---|
| 1 ಆಂಧ್ರಪ್ರದೇಶ | 770 | 15 ಒರಿಸ್ಸಾ | 560 |
| 2 ಅಸ್ಸಾಂ | 443 | 16 ಪಂಜಾಬ್ | 253 |
| 3 ಬಿಹಾರ್ | 836 | 17 ರಾಜಸ್ಥಾನ | 820 |
| 4 ಗುಜರಾತ್ | 393 | 18 ತಮಿಳುನಾಡು | 485 |
| 5 ಹರ್‍ಯಾನಾ | 292 | 19 ತ್ರಿಪುರಾ | 48 |
| 6 ಹಿಮಾಚಲ ಪ್ರದೇಶ | 168 | 20 ಉತ್ತರ ಪ್ರದೇಶ | 1073 |
| 7 ಜಮ್ಮು ಮತ್ತು ಕಾಶ್ಮೀರ | 411 | 21 ಪಶ್ಚಿಮ ಬಂಗಾಳ | 946 |
| 8 ಕರ್ನಾಟಕ | 486 | 22 ಸಿಕ್ಕಿಂ | 1 |
| 9 ಕೇರಳ | 409 | ಎಲ್ಲ ರಾಜ್ಯಗಳೂ ಒಟ್ಟು | 9677 |
| 10 ಮಧ್ಯ ಪ್ರದೇಶ | 483 | 23 ಅರುಣಾಚಲ ಪ್ರದೇಶ | 4 |
| 11 ಮಹಾರಾಷ್ಟ್ರ | 743 | 24 ಗೋವಾ, ಡಮನ್, ದೀವ್ | 74 |
| 12 ಮಣಿಪುರ | 58 | 25 ಪಾಂಡಿಚೇರಿ | 15 |
| 13 ಮೇಘಾಲಯ | 20 | ಕೇಂದ್ರಾಡಳಿತ ಪ್ರದೇಶಗಳು ಒಟ್ಟು | 106 |
| 14 ನಾಗಾಲ್ಯಾಂಡ್ | 29 | ಎಲ್ಲಾ ರಾಜ್ಯ + ಎಲ್ಲಾ ಕೇಂದ್ರಾಡಳಿತ ಪ್ರದೇಶಗಳು ಸೇರಿ | 9783 |

ಮೂಲ : 'ಇಕನಾಮಿಕ್ ಟೈಮ್ಸ್' ಮೇ 24, 1978

ಮೇಲಿನ ಅಂಕಿ-ಅಂಶಗಳ ಪ್ರಕಾರ, ದೇಶದ ಎಲ್ಲಾ ೨೨ ರಾಜ್ಯಗಳೂ ಕೇಂದ್ರದ ಸಾಲದಲ್ಲಿ ಬಿದ್ದಿವೆ.

## ಕೋಷ್ಟಕ ೬

### ಕೇಂದ್ರಕ್ಕೆ ರಾಜ್ಯ ಸರಕಾರಗಳಿಂದ ಸಾಲದ ಮರುಪಾವತಿ ಮತ್ತು ಕೊಟ್ಟ ಬಡ್ಡಿಯ ಮೊತ್ತ (ಕೋಟಿ ರೂ. ಗಳಲ್ಲಿ)

| | | ಎಲ್ಲ ರಾಜ್ಯ + ಕೇಂದ್ರಾಡಳಿತ ಪ್ರದೇಶಗಳಿಂದ ಕೇಂದ್ರದ ಸಾಲದ ಮರುಪಾವತಿಯ ಮೊತ್ತ | | ಎಲ್ಲ ರಾಜ್ಯ + ಕೇಂದ್ರಾಡಳಿತ ಪ್ರದೇಶಗಳು ಒಟ್ಟು ಕೇಂದ್ರದ ಸಾಲಕ್ಕೆ ಕೊಟ್ಟ ಬಡ್ಡಿಯ ಮೊತ್ತ |
|---|---|---|---|---|
| 1969-70 | .... | 633 | .... | 281 |
| 70-71 | .... | 658 | .... | 259 |
| 71-72 | .... | 855 | .... | 296 |
| 72-73 | .... | 678 | .... | 382 |
| 73-74 | .... | 969 | .... | 390 |
| 74-75 | .... | 507 | .... | 374 |
| 75-76 | .... | 746 | .... | 457 |
| 76-77 | .... | — | .... | 390 |
| 77-78 | .... | 860 | .... | 524 |
| 78-79* | .... | 1030 | .... | 575 |

*[ಬಜೆಟ ಅಂದಾಜು]

ಆಧಾರ: 'ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,' ಎಪ್ರಿಲ್ 22, 1978

**ಟಿಪ್ಪಣಿ :** ಕೇಂದ್ರದಿಂದ ಪಡೆಯುವ ಸಾಲಕ್ಕೆ ರಾಜ್ಯಗಳು ಅಧಿಕ ಮೊತ್ತದ ಬಡ್ಡಿ ತೆರಬೇಕು. ಕೇಂದ್ರ-ರಾಜ್ಯ ಸಂಬಂಧಗಳು ಸಾಹುಕಾರ-ಸಾಲಗಾರ ಸಂಬಂಧದ ಮಟ್ಟಕ್ಕೆ ಬಂದು ಮುಟ್ಟಿದೆ. ಭಾರತದ ಎಲ್ಲಾ ರಾಜ್ಯಗಳೂ ಕೇಂದ್ರದ ಸಾಲದಲ್ಲಿ ಬಿದ್ದಿವೆ.

## ಕೋಷ್ಟಕ ೭

### ಕೇಂದ್ರದ ಪ್ಯಾರಾಮಿಲಿಟರಿ ದಳಗಳ ಬಲ

| | | |
|---|---|---|
| ಕೇಂದ್ರ ರಿಸರ್ವ ಪೋಲಿಸ್ | 65,000 | (1975 ರಲ್ಲಿ) |
| ಗಡಿ ಭದ್ರತಾ ದಳ | 70,000 | (1975 ರಲ್ಲಿ) |
| ಕೇಂದ್ರ ಕೈಗಾರಿಕಾ ಭದ್ರತಾ ದಳ | 17,000 | (1974 ರಲ್ಲಿ) |

**ಟಿಪ್ಪಣಿ :** ದೇಶದಲ್ಲಿನ ಪೋಲಿಸ್ ಮತ್ತು ಪ್ಯಾರಾಮಿಲಿಟರಿ ದಳಗಳು ಒಟ್ಟು ಕೂಡಿ ೮,೦೦,೦೦೦ ಜನಬಲವಿದ್ದು ದೇಶದ ಸೈನಿಕರ ಸಂಖ್ಯೆಗೆ ಸರಿಸಮಾನವಾಗಿದೆ ಎಂದು ಅಂದದಾಜು ಮಾಡಲಾಗಿದೆ ಈ ದಳಗಳನ್ನು ಇಂದು ಉಪಯೋಗಿಸುವ ಉದ್ದೇಶಗಳಿಗೂ ಅವುಗಳ ನಿರ್ಮಾಣ ಪೂರ್ವದಲ್ಲಿ ಘೋಷಿಸಿದ ಉದ್ದೇಶಗಳಿಗೂ ಯಾವುದೇ ಸಂಬಂಧವಿಲ್ಲ. ಸಂವಿಧಾನದ ಪ್ರಕಾರ ಪೋಲಿಸ್ ಮತ್ತು ಶಿಸ್ತುಪಾಲನೆ ರಾಜ್ಯಗಳ ಕರ್ತವ್ಯವಾಗಿದ್ದರೂ ಸಹ, ಕೇಂದ್ರವು ಈ ದಳಗಳ ಮುಖಾಂತರ ರಾಜ್ಯದ ಆಂತರಿಕ ವಿಷಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿದೆ.

ಬರಲಿದೆ—

ಭಾರತ ಕಮ್ಯುನಿಸ್ಟ ಪಕ್ಷದ (ಮಾರ್ಕ್ಸವಾದಿ)
ಹತ್ತನೇ ಸಮ್ಮೇಳನದಲ್ಲಿ
ಅಂಗೀಕರಿಸಿದ

# ರಾಜಕೀಯ ಗೊತ್ತುವಳಿ